# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೬
★
ಸಂಚಿಕೆ ೧

ಏಪ್ರಿಲ್
೧೯೮೫

## ಈ ಸಂಚಿಕೆಯಲ್ಲಿ



ಪ್ರಕಾಶಕರು: ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಬ್ಯಾಕಿಂಗ್ ಪ್ರಪಂಚ

ಸಂಪುಟ ೬ ಏಪ್ರಿಲ್ ೧೯೮೫ ಸಂಚಿಕೆ ೧




# ಸಂಪಾದಕೀಯ

ಭಾರತದ ಬ್ಯಾಂಕಿಂಗ್ ವಲಯದಲ್ಲಿ ಈಚೀಚೆಗೆ ಬಹಳಷ್ಟು ಸಂಭವಿಸುತ್ತಿದೆ—ಒಳ್ಳೆಯದು, ಕೆಟ್ಟದ್ದು, ಕುರೂಪವಾದ್ದು, ಎಲ್ಲ.

ಬೆಳೆಯುವ ವ್ಯವಸ್ಥೆಯಲ್ಲಿ ಒಳ್ಳೆಯದರೊಂದಿಗೆ ಕೆಟ್ಟದ್ದೂ ಸೊಟ್ಟನಾದ್ದೂ ಸೇರಿಕೊಂಡೇ ಇರುವುದು ಸಾಮಾನ್ಯ—ಪ್ರವಾಹ ಬಂದಾಗ ಕಸಕಡ್ಡಿಗಳೂ ತೇಲಿ ಬರುವಂತೆ. ಕ್ರಮೇಣ ನೀರು ತಳಿದು ತಿಳಿಯಾಗಿ ಮೊತ್ತವಾಗಿ ಗಂಭೀರವಾಗಿ ಪ್ರವಹಿಸುವ ಸ್ಥಿತಿ ಬರುವಂತೆ. ಬೆಳೆವಣಿಗೆ ಒಂದು ಘಟ್ಟ ಮುಟ್ಟಿದಾಗ ಸತ್‌ಪ್ರವೃತ್ತಿಗಳೇ ದೃಢವಾಗಿ ಬಲಿತು ಉಳಿಯುವುವೆಂಬುದು ಆಸೆ. ಆದರೆ ಹಾಗಾಗದೆ ಆಂತರಿಕ ವೈರುಧ್ಯಗಳಿಂದಾಗಿ ವ್ಯವಸ್ಥೆಯೇ ಕುಸಿದುಬೀಳುವಂಥ ಪ್ರವೃತ್ತಿಗಳೇ ಬಲಗೊಳ್ಳಬಹುದೆಂಬ ಅಂಜಿಕೆಯೂ ಇಲ್ಲದಿರುವುದಿಲ್ಲ.

ಮೂರು ರಾಷ್ಟ್ರೀಕೃತ ಬ್ಯಾಂಕುಗಳ ಮುಖ್ಯರ ಸೇವೆಯನ್ನು ಸರ್ಕಾರ ಮುಕ್ತಾಯಗೊಳಿಸುವ ಕ್ರಮವನ್ನು ಈಚೆಗೆ ತೆಗೆದುಕೊಂಡಿದ್ದು ಈ ಪ್ರವೃತ್ತಿಗಳು ಎಷ್ಟು ಬಲಗೊಂಡಿವೆಯೆಂಬುದರ ಸಂಕೇತ. ಕುಟ್ಟೆಯಂತೆ ಇಡೀ ವ್ಯವಸ್ಥೆಯನ್ನೇ ಕೊರೆದು ಹಾಕುತ್ತಿರುವ ವಿಷಾಣುಗಳ ಸಂಪೂರ್ಣ ಸ್ವರೂಪವೇನೂ ಬಯಲಾಗಿಲ್ಲ. ಮಂಜುಗಡ್ಡೆಯ ಮಹಾಗಿರಿಯ ತುತ್ತತುದಿ ಮಾತ್ರವೇ ನಮಗೆ ಗೋಚರವಾಗಿರತಕ್ಕದ್ದು. ಅಗೋಚರವಾದ್ದು ಇನ್ನೂ ಬಹಳಷ್ಟು ಇದೆಯೆಂಬುದು ನಿರ್ವಿವಾದ.

## ಅಪರಾಧಿಕ ಬ್ಯಾಂಕಿಂಗ್

ನಮ್ಮ ಬ್ಯಾಂಕಿಂಗ್ ವ್ಯವಸ್ಥೆಯನ್ನು ಕೇಂದ್ರೀಯ ಬ್ಯಾಂಕಿಂಗ್, ವಾಣಿಜ್ಯ ಬ್ಯಾಂಕಿಂಗ್, ಸಹಕಾರಿ ಬ್ಯಾಂಕಿಂಗ್ ಎಂದು ಮುಂತಾಗಿ ವಿಂಗಡಿಸುವುದು ಹಿಂದಿನಿಂದ ಬಂದಿರುವ ಪರಿಪಾಟಿ. ಈಗ ಇವುಗಳ ಜೊತೆಗೆ 'ಅಪರಾಧಿಕ ಬ್ಯಾಂಕಿಂಗ್' ಎಂಬ ಇನ್ನೊಂದು ಪ್ರರೂಪವನ್ನೂ ಸೇರಿಸಬೇಕಾದೀತೇನೋ! ಠೇವಣಿಗಳನ್ನು ಸ್ವೀಕರಿಸುವುದು, ಚೆಕ್ಕುಗಳ ಮೇಲೆ ಹಣ ಪಾವತಿ ಮಾಡುವುದು ಇವೆರಡೂ ಬ್ಯಾಂಕುಗಳ ಮುಖ್ಯ ಕಾರ್ಯಭಾರಗಳಾಗಿರುವಂತೆ ಅಪರಾಧವೆಸಗುವುದೂ ಆಗಿದೆಯೇನೋ ಎಂದು ವಿಸ್ಮಯಪಡಬೇಕಾದ ಪರಿಸ್ಥಿತಿ ಬಂದಿರುವಂತಿದೆ. ಈಗಾಗಲೇ ಬ್ಯಾಂಕಿಂಗ್ ವ್ಯವಸ್ಥೆಗೆ ಎಷ್ಟೊಂದು ಹಾನಿ ತಟ್ಟಿದೆಯೆಂಬುದನ್ನು ಖಚಿತವಾಗಿ ಹೇಳುವಂತಿಲ್ಲ. ಏಕೆಂದರೆ ಈ

ಕಲಾಪಗಳ ಮೇಲೆ ರಹಸ್ಯದ ತೆರೆಯೊಂದು ಮುಸುಕಿ ಬಿಟ್ಟಿದೆ.

ಲಂಡನ್ನಿನ ಪ್ರಮುಖ ಭಾರತೀಯ ಉದ್ಯಮಿಯೊಬ್ಬರ ಸಂಸ್ಥೆಗಳಿಗೆ ಭಾರತದ ಮೂರು ರಾಷ್ಟ್ರೀಕೃತ ಬ್ಯಾಂಕುಗಳು ಅಗಾಧ ಮೊತ್ತದ ಸಾಲಗಳನ್ನು ನೀಡಿದ್ದು, ಆ ಸಾಲಗಳನ್ನು ವಸೂಲುಮಾಡಲು ಸಾಧ್ಯವಾಗದಂಥ ಪರಿಸ್ಥಿತಿ ಒದಗಿ ಬಂದದ್ದು, ಈ ಸಾಲಗಳಿಗೆ ಸಂಬಂಧಿಸಿದ ಬಹುತೇಕ ವಹಿವಾಟುಗಳು ಕೇವಲ ಖೊಟ್ಟಿಯವಾಗಿದ್ದುದರಿಂದ ಬ್ಯಾಂಕುಗಳು ಭಾರಿ ನಷ್ಟ ಅನುಭವಿಸಬೇಕಾಗಿ ಬಂದದ್ದು, ರಿಸರ್ವ್ ಬ್ಯಾಂಕಿಗೂ ಭಾರತ ಸರ್ಕಾರಕ್ಕೂ ಈ ವಿಚಾರಗೊತ್ತಿದ್ದೂ ಪರಿಸ್ಥಿತಿ ಕೈಮೀರುವವರೆಗೂ ಅವು ಏನೂ ಕ್ರಮ ತೆಗೆದುಕೊಳ್ಳದೆ ಹೋದದ್ದು—ಇವೆಲ್ಲಾ ಈಗ ಢಾಣಾಡಂಗುರವಾಗಿರುವ ಸಂಗತಿಗಳು. ತುಂಬಾ ವಿಚಿತ್ರದ ಸಂಗತಿಯೆಂದರೆ, ಭಾರತದ ನಿಯಮಾವಳಿಗಳಿರಲಿ, ಈ ಬ್ಯಾಂಕುಗಳು ಬ್ರಿಟಿಷ್ ನಿಯಮಗಳನ್ನು ಕೂಡ ಮುರಿದಿರತಕ್ಕದ್ದು. ಯಾವುದೇ ಬ್ಯಾಂಕು ತನ್ನ ಬಂಡವಾಳ ಹಾಗೂ ಮೀಸಲುಗಳ ಪತ್ತನೆಯ ಒಂದರಷ್ಟಕ್ಕಿಂತ ಹೆಚ್ಚು ಮೊಬಲಗನ್ನು ಯಾವನೇ ಒಬ್ಬ ವ್ಯಕ್ತಿಗೆ ಸಾಲವಾಗಿ ನೀಡಬಾರದೆಂಬುದು ಬ್ರಿಟಿಷ್ ಸರ್ಕಾರದ ದಿಗ್ದರ್ಶಕ ಸೂತ್ರಗಳಲ್ಲೊಂದು. ಈ ಭಾರತೀಯ ಬ್ಯಾಂಕುಗಳ ಇಂಗ್ಲೆಂಡ್ ಶಾಖೆಗಳು ಈ ಸೂತ್ರಗಳನ್ನು ಹರಿದು ಚೆಲ್ಲಿದ್ದುವು, ದಿವಾಳಿಯಾಗಲಿದ್ದ ಆ ಉದ್ಯಮಿಗೆ ಈ ಬ್ಯಾಂಕುಗಳು ನಾ ಮುಂದು ತಾ ಮುಂದು ಎಂದು ಸಾಲಕೊಡಲು ನುಗ್ಗಿದುವು, ತಂತಮ್ಮಲ್ಲೇ ಸ್ಪರ್ಧಿಸಿದುವು. ರಿಸರ್ವ್ ಬ್ಯಾಂಕೂ ಭಾರತ ಸರ್ಕಾರವೂ ಮೌನ ಪ್ರೇಕ್ಷಕರ ಪಾತ್ರ ವಹಿಸಿದ್ದವು. ಬ್ಯಾಂಕು ಶಾಖೆಗಳು ಮಾಡುವ ಯಾವುದೇ ಅಕೃತ್ಯಗಳಿಗೆ ಅವುಗಳ ನೇತಾರರೇ ಹೊಣೆಯಾಗುತ್ತಾರೆಂಬುದಾಗಿ ರಿಸರ್ವ್ ಬ್ಯಾಂಕ್ ಎಚ್ಚರಿಕೆಯನ್ನೇನೋ ನೀಡಿತು. ಆದರೆ ಅಕ್ರಮಗಳನ್ನು ಬಯಲಿಗೆಳೆಯಲು ಮುಕ್ತಕ್ರಮ ತೆಗೆದುಕೊಳ್ಳಲು ಮೊದಲೇ ಏಕೆ ಅದು ಪ್ರಯತ್ನಿಸಲಿಲ್ಲ ? ಅಥವಾ ಅದರ ಅಧೀಕ್ಷಣಾಧಿಕಾರಕ್ಕೆ ಮೊನೆಯಿಲ್ಲವೆ ? ಇದು ಮೂಲಭೂತ ಪ್ರಶ್ನೆ.

1982ರಷ್ಟು ಹಿಂದೆ ರಿಸರ್ವ್ ಬ್ಯಾಂಕಿನ ಅಂದಿನ ಗವರ್ನರರು ಬ್ಯಾಂಕುಗಳ ವಂಚನೆ ಪ್ರಕರಣಗಳ ತನಿಖೆಗಾಗಿ ವಿಶೇಷ ವಿಭಾಗವೊಂದನ್ನು ತೆರೆದಿದ್ದರು. ಈ ವಿಭಾಗ ವೇನೋ ಕೆಲಸ ಮಾಡುತ್ತಿದೆ. ಆದರೆ ಈ ಪ್ರಕರಣಗಳು ಎಷ್ಟೊಂದು ವ್ಯಾಪಕವಾಗಿವೆಯೆಂದರೆ, ಇವುಗಳ ತನಿಖೆಯ ಕಾರ್ಯ ನಿರ್ವಹಿಸಲು ಸಾಕಷ್ಟು ಸಿಬ್ಬಂದಿಯೇ ಇದ್ದಂತಿಲ್ಲ. ಹೀಗಾಗಿ ರಿಸರ್ವ್ ಬ್ಯಾಂಕಿನ ಈ ಉದ್ದೇಶ ಸಫಲವಾಗಿಲ್ಲ ವೆನಿಸುತ್ತದೆ. ರಾಷ್ಟ್ರೀಕೃತ ಬ್ಯಾಂಕುಗಳ ಶಾಖೆಗಳೂ ವಹಿವಾಟುಗಳೂ ವಿಸ್ತರಿಸುತ್ತಿದ್ದಂತೆ ವಂಚನೆಗಳೂ ಬೆಳೆಯುತ್ತಿವೆ. 1979ರಲ್ಲಿ ಬ್ಯಾಂಕಿಂಗ್ ವಲಯದಲ್ಲಿಯ ವಂಚನೆಗಳ ಸಂಖ್ಯೆ 1,400 ಇದ್ದದ್ದು 1983ರ ವೇಳೆಗೆ 2,343ಕ್ಕೆ ಏರಿತು. ಬ್ಯಾಂಕುಗಳ ನಷ್ಟವೂ ಈ ಅವಧಿಯಲ್ಲಿ ರೂ. 15,4 ಕೋಟಿಯಿಂದ ರೂ. 33.39 ಕೋಟಿಗೆ ಬೆಳೆಯಿತು. 1983ರಂದ ಈಚೆಗೆ ಈ ಸಂಖ್ಯೆಗಳು ಇನ್ನೂ ಗಮನಾರ್ಹವಾಗಿ ಬೆಳೆದಿವೆಯೆಂಬುದರಲ್ಲಿ ಸಂದೇಹವಿಲ್ಲ. ಮೇಲೆ ಪ್ರಸ್ತಾಪಿಸಲಾದ ಇಂಗ್ಲೆಂಡಿನ ಉದ್ಯಮಿಗಳಿಗೆ ಸಂಬಂಧಿಸಿದ ವಹಿವಾಟುಗಳಲ್ಲಿ ಮೂರು ಭಾರತೀಯ ಬ್ಯಾಂಕುಗಳು ಅನುಭವಿಸಿದ ನಷ್ಟ ಸುಮಾರು ೩೦ಕೋಟಿ ಡಾಲರ್ ಎಂದು ಹೇಳಲಾಗಿದೆ.

## ಕಾರಣಗಳು

ಬ್ಯಾಂಕಿಂಗ್ ವಲಯದಲ್ಲಿ ಭ್ರಷ್ಟಾಚಾರವೂ ಅಕ್ರಮಗಳೂ ಹಣದ ದಸ್ತುಗಳೂ (ಎಂಬೆಜ್‌ಲ್‌ಮೆಂಟ್) ಬೆಳೆಯುತ್ತಿರುವುದಕ್ಕೆ ಸಾಮಾನ್ಯವಾಗಿ ನೀಡಲಾಗುವ ಕಾರಣಗಳು ಎರಡು. ವೇಗವಾದ ಶಾಖಾ ವಿಸ್ತರಣೆಯಿಂದಾಗಿ ಬ್ಯಾಂಕಿಂಗ್ ವಲಯಕ್ಕೆ ಸಿಬ್ಬಂದಿಯ ಬೇಡಿಕೆ ಬಹಳವಾಗಿ ಬೆಳೆದಿದೆ. ಸಾಕಷ್ಟು ತರಬೇತಿ ಪಡೆಯದವರನ್ನು ನೇಮಿಸಿಕೊಳ್ಳುವುದು ಅನಿವಾರ್ಯವಾಗಿದೆ. ಇದರಿಂದಾಗಿ ಶಾಖಾ ಲೆಕ್ಕಗಳ ಹಾಗೂ ಅಂತರ ಶಾಖಾ ಲೆಕ್ಕಗಳ ಶಿಲ್ಕು ತಾಳೆ ಕೆಲಸ ತುಂಬಾ ಹಿಂದೆ ಬಿದ್ದಿದೆ. ಈ ಪರಿಸ್ಥಿತಿ ವಂಚನೆಗೆ ಅವಕಾಶ ನೀಡಿದೆ. ಬೆಳೆಯುತ್ತಿರುವ ಬ್ಯಾಂಕಿಂಗ್ ವಹಿವಾಟುಗಳಿಗೆ ಅನುಗುಣವಾಗಿ ಗಣಕೀಕರಣ ಹಾಗೂ ಯಾಂತ್ರೀಕರಣದಲ್ಲಿ ಮುನ್ನಡೆ ಸಾಧಿಸಿಲ್ಲವೆನ್ನಲಾಗಿದೆ. ಖಾತಾ ವರ್ಗಾವಣೆ ಯಂತ್ರ, ಸೂಕ್ಷ್ಮ ಪ್ರಕ್ರಮೀಕರಣ ಯಂತ್ರ, ಗಣಕ ಇವುಗಳನ್ನು ಮುಂದಿನ ಮೂರು ವರ್ಷಗಳಲ್ಲಿ ಕೊಳ್ಳಲು ಬ್ಯಾಂಕುಗಳು ಯೋಚಿಸುತ್ತಿವೆ.

ಬ್ಯಾಂಕ್ ಕಲಾಪಗಳಲ್ಲಿ ದಕ್ಷತೆಯನ್ನು ಹೆಚ್ಚಿಸಿದಾಗ ವಂಚನೆ, ಭ್ರಷ್ಟಾಚಾರ, ಹಣದ ದುರುಪಯೋಗಗಳು ತಾವಾಗಿಯೇ ಮರೆಯಾಗಿಬಿಡುವುದಿಲ್ಲ. ಇವು ಸಂಭವಿಸದಂತೆ ಮುನ್ನೆಚ್ಚರಿಕೆ, ಸುಬದ್ಧ ನಿರೀಕ್ಷಣಾ ವ್ಯವಸ್ಥೆಯ ರಚನೆ, ಅಕ್ರಮಗಳ ಪತ್ತೆಯಾದಾಗ ಸಂಬಂಧಪಟ್ಟವರ ಮೇಲೆ ಆ ಕೂಡಲೇ ಯುಕ್ತ ಕ್ರಮ ಇವೆಲ್ಲಾ ಅಗತ್ಯ.

## ರಾಜಕೀಯ ಪ್ರಭಾವ

ಅಪರಾಧಿಕ ಬ್ಯಾಂಕಿಂಗ್ ವಿಷಯಕ್ಕೆ ಸಂಬಂಧಿಸಿದಂತೆ ಇನ್ನೊಂದು ವಿಚಾರವನ್ನಿಲ್ಲಿ ವಿವೇಚಿಸಲೇಬೇಕು. ಬ್ಯಾಂಕುಗಳಲ್ಲಿ ನಡೆಯುತ್ತಿರುವ ವಂಚನೆಗಳೂ ಅಕ್ರಮಗಳೂ ಇಡೀ

ವ್ಯವಸ್ಥೆಯ ಆಂತರಿಕ ವ್ಯಾಧಿಯ ಬಹಿರ್ಲಕ್ಷಣಗಳು. ನಮ್ಮ ಸಾರ್ವಜನಿಕ ಜೀವನದಲ್ಲಿ—ಮುಖ್ಯವಾಗಿ ರಾಜಕೀಯ ಕ್ಷೇತ್ರದಲ್ಲಿ—ಬೆಳೆಯುತ್ತಿರುವ ಅಪರಾಧಿಕ ಪ್ರವೃತ್ತಿಯೇ ಬ್ಯಾಂಕಿಂಗ್ ವ್ಯವಸ್ಥೆಯೊಳಗೂ ಹಬ್ಬಿದೆಯೆಂಬುದು ತುಂಬಾ ವಿಷಾದದ ಸಂಗತಿ. ಅಧಿಕಾರದಲ್ಲಿರುವ ರಾಜಕಾರಣಿಗಳು ಬ್ಯಾಂಕುಗಳ ಆಡಳಿತದಲ್ಲಿ ತಮ್ಮ ಪ್ರಭಾವ ಬೀರುತ್ತಬಂದಿದ್ದಾರೆ; ಬ್ಯಾಂಕುಗಳ ಆಡಳಿತ ಮಂಡಲಿಗಳಲ್ಲಿ ತಮ್ಮವರನ್ನು ತುಂಬುತ್ತ ಬಂದಿದ್ದಾರೆ; ಇವರ ಮೂಲಕ ಬ್ಯಾಂಕುಗಳ ವ್ಯವಸ್ಥಾಪನಗಳ ಮೇಲೆ ತಮ್ಮ ಒತ್ತಡ ಹಾಕುತ್ತಿದ್ದಾರೆ. ಬ್ಯಾಂಕಿಂಗ್ ಸಂಪ್ರದಾಯ ಮತ್ತು ಸಮುದಾಚಾರಗಳನ್ನುಗಾಳಿಗೆತೂರುವಂತೆ ಮಾಡಿದ್ದಾರೆ. ಅಡಿಯಿಂದ ಮುಡಿಯ ವರೆಗೆ ಎಲ್ಲ ಹಂತಗಳಲ್ಲೂ ಈ ಒತ್ತಡ ಪ್ರಬಲವಾಗಿ ಬೆಳೆದಿದೆ. ತಳಾತಳದ ಶಾಖಾ ಮಟ್ಟದಲ್ಲಿ ಅದರ ವ್ಯವಸ್ಥಾಪಕನಿಗೆ ಸ್ಥಳೀಯ ಪುಡಾರಿಗಳ ಒತ್ತಡ, ಅಗ್ರಸ್ತರದಲ್ಲಿ ಮಂತ್ರಿಗಳ ಮಟ್ಟದಿಂದ ಬರುವ ಒತ್ತಡ. ಹಲವು ಬಗೆಯ ಯಜಮಾನರ ಅಡಿಯಲಿ ಸೇವೆ ಸಲ್ಲಿಸಬೇಕಾದ ಬ್ಯಾಂಕ್ ಅಧಿಕಾರಿ ಈ ಒತ್ತಡಗಳನ್ನು ಎದುರಿಸಿ ನಿಲ್ಲುವಷ್ಟು ಸ್ಥೈರ್ಯ ತೋರಿಸುವುದು ಅಸಾಧ್ಯ. ಹಾಗೆ ಮಾಡುವುದಾದರೆ ಅವನ ಅಧಿಕಾರಕ್ಕೇ ಸಂಚಕಾರ. ಆತ್ಮಹತ್ಯಾತ್ಮಕವಾದ ಇಂಥ ನಿಲುವು ತಳೆಯಲು ಇಂದಿನ ಪರಿಸ್ಥಿತಿಯಲ್ಲಿ ಯಾವ ನೌಕರನೂ ಧೈರ್ಯ ಮಾಡಲಾರ. ಅಂಥ ಧೈರ್ಯ ಮಾಡಿದರೆ ಅವನೇನೂ ಗೆಲ್ಲಲಾರ, ಅನಿಷ್ಟಕಾರಿ ಪ್ರವೃತ್ತಿಗಳನ್ನು ಹತ್ತಿಕ್ಕಲಾರ ಈ ಸೋಲುವ ಸಮರದಲ್ಲಿ ಅವನ ಪರಾಜಯ ಸ್ವತಃಸಿದ್ಧ. ದುಷ್ಟಕೂಟಕ್ಕೆ ಮಣಿಯದೆ ವಿಧಿಯಿಲ್ಲ. ಒಮ್ಮೆ ಈ ಕೊಳೆತ ಆರಂಭವಾಯಿತೆಂದರೆ ಅದು ಬುಡವನ್ನೇ ತಿನ್ನಲು ತೊಡಗುತ್ತದೆ. ಈ ಅವ್ಯಾಪಾರದಲ್ಲಿ ಎಲ್ಲರೂ ಪಾಲ್ಗೊಳ್ಳುವಂತಾಗುತ್ತದೆ. ಲಂಡನ್ನಿನಲ್ಲಿ ತಲೆದೋರಿದ ಅಕ್ರಮಗಳು ಬ್ಯಾಂಕಿಂಗಿನ ಅಂಗೋಪಾಂಗಗಳಲ್ಲೆಲ್ಲ ವ್ಯಾಪಿಸಿರುವ ವಿಷದ ಕುಡಿ.

ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿರುವ ಹೊಸ ನಾಯಕತ್ವ ಈ ವಿಷವ್ಯಾಪನೆಯನ್ನರಿಯದಿಲ್ಲ. ಇಡೀ ಬ್ಯಾಂಕಿಂಗ್ ವ್ಯವಸ್ಥೆಯನ್ನು ಸುಸ್ಥಿತಗೊಳಿಸಬೇಕೆಂಬ ಆಕಾಂಕ್ಷೆ ವ್ಯಕ್ತವಾಗಿರುವುದು ಈ ಅರಿವಿನಿಂದಾಗಿ. ಇದರ ಮೊದಲನೆಯ ಕ್ರಮವೆಂದರೆ, ದೇಶದಲ್ಲಿರುವ ಇಪ್ಪತ್ತೆಂಟು ರಾಷ್ಟ್ರೀಕೃತ ಬ್ಯಾಂಕುಗಳ ನಿರ್ದೇಶಕ ಮಂಡಲಿಗಳಲ್ಲಿರುವ 14 ಅಧಿಕಾರೇತರ ನಿರ್ದೇಶಕರನ್ನು ಅವರ ಅವಧಿಗಳು ಪೂರೈಸಿದ ಮೇಲೆ ನಿವೃತ್ತಿಗೊಳಿಸಲಾಗುವುದೆಂಬ ನಿರ್ಧಾರ. ಈ 'ರಾಜಕಾರಣಿ' ನಿರ್ದೇಶಕರು ಬ್ಯಾಂಕುಗಳಲ್ಲಿ ತಂತಮ್ಮವೇ ಆದ ಸಂಚುಕೂಟಗಳನ್ನು ರಚಿಸಿಕೊಂಡಿದ್ದರು. ವೃತ್ತಿಪರ ಅಧಿಕಾರಿಗಳ ತೀರ್ಮಾನಗಳನ್ನು ತಮ್ಮಂತೆ ಪರಿವರ್ತಿಸಿಕೊಳ್ಳುತ್ತಿದ್ದರು. ಸಾಲ ನೀಡಿಕೆ, ಬಾಕಿ ವಸೂಲಿ, ಬ್ಯಾಂಕುಗಳ ಹೊಸ ಶಾಖೆಗಳ ಸ್ಥಾಪನೆ, ಸಿಬ್ಬಂದಿ ನೇಮಕ, ಬಡತಿ, ವರ್ಗ ಮುಂತಾದ ಎಲ್ಲ ವಿಚಾರಗಳಲ್ಲೂ ಇವರು ತಲೆ ಹಾಕುತ್ತಿದ್ದರು. ಕೈವಾಡ ನಡಸುತ್ತಿದ್ದರು. ಇವರ ನಿವೃತ್ತಿಯ ತೀರ್ಮಾನ ಒಂದು ಸರಿಯಾದ ಹೆಜ್ಜೆ.

### ಪರಿಸ್ಥಿತಿಯ ನೈಜಚಿತ್ರ

ಕೊಳೆತ, ಒಣಗಿದ, ಹುಳುಬಿದ್ದ ಕೊಂಬೆ ರೆಂಬೆಗಳನ್ನು ಕಡಿದುಹಾಕುವುದು ಮೊದಲ ಹೆಜ್ಜೆ. ಆದರೆ ಹೊಸ ಟಿಸಿಲು ಒಡೆಯುವಂತೆ ಕೃಷಿ ಮಾಡುವುದೂ ಕಸಿ ಮಾಡುವುದೂ ಅಗತ್ಯ. ಈ ನಿಟ್ಟಿನಲ್ಲಿ ಎಷ್ಟರಮಟ್ಟಿನ ಪ್ರಯತ್ನ ಸಾಧ್ಯ ? ಇಂಥ ಪ್ರಯತ್ನ ಎಷ್ಟು ಯಶಸ್ವಿಯಾದೀತು ? ಇದು ವಿಚಾರಣೀಯ. ವಾಣಿಜ್ಯ, ಕೈಗಾರಿಕೆ, ಕೃಷಿ ಹಾಗೂ ನಾನಾ ವೃತ್ತಿಗಳಲ್ಲಿ ಪ್ರವೀಣರೂ ಅನುಭವಿಗಳೂ ದಕ್ಷರೂ ಆದವರನ್ನು ಆರಿಸಿ, ಖಾಲಿಯಾದ ಸ್ಥಾನಗಳಲ್ಲಿ ತುಂಬುವುದು ದೊಡ್ಡ ಕೆಲಸ, ಕಷ್ಟದ ಕೆಲಸ. ಅಂಥವರ ಅನ್ವೇಷಣೆ ಹಾಗೂ ಆಯ್ಕೆ ಕಠಿಣ. ನಿಜವಾದ ದಕ್ಷರು ಬೆಳಕಿಗೆ ಬರುವುದು ಅಪುರೂಪ. ಬಂದರೂ ಅವರ ನೇಮಕಕ್ಕೆ ಹಲವಾರು ಅಡ್ಡಿ, ನಾನಾ ಬಗೆಯ ಪ್ರಭಾವ. ನೇಮಕವಾದವರು ಪೂರ್ವಾಗ್ರಹ ವಿಮುಕ್ತವಾಗಿ ಕೆಲಸ ಮಾಡಲು ನಾನಾ ಆತಂಕ, ಪಥ ವಿಚಲನೆಗೆ ನಾನಾ ಪ್ರಲೋಭನ, ಹೀಗಾಗಿ ಇದೊಂದು ಅಗ್ನಿಪರೀಕ್ಷೆಯೇ. ಖಾಲಿಯಾದ ಸ್ಥಾನಗಳ ಭರ್ತಿ ಆಗದಿರುವ ವರೆಗೂ ಈ ಮಂಡಲಿಗಳು ಸಾರ್ವಜನಿಕರ ಪ್ರಾತಿನಿಧ್ಯ ಕಳೆದುಕೊಂಡು ಬಡವಾಗಿರುತ್ತವೆ. ಒಂದು ಕಡೆ ಸರ್ಕಾರಿ ನಾಮಕರಣ ಸದಸ್ಯರು, ಇನ್ನೊಂದು ಕಡೆ ಅಧಿಕಾರಿಗಳ ಹಾಗೂ ಇತರ ನೌಕರರ ಪ್ರತಿನಿಧಿಗಳು. ನಡುವೆ ಅಧ್ಯಕ್ಷ. ವ್ಯವಸ್ಥಾಪನವೂ ನೌಕರ ವರ್ಗವೂ ಇದಿರುಬದಿರು, ಅನೇಕ ಸಂಸ್ಥೆಗಳಲ್ಲಿ ತಲೆಯಾಳುಗಳೇ ಇಲ್ಲದ ಪರಿಸ್ಥಿತಿಯಿದೆ. ದಕ್ಷರೂ ಅನುಭವಿಗಳೂ ಪ್ರಾಮಾಣಿಕರೂ ಆದವರ ಅಭಾವ ಉಂಟಾಗಿದೆ. ನಮ್ಮ ದೇಶದಲ್ಲಿ ಇವರ ಪೂರೈಕೆಯ ಕೊರತೆ ಬಹಳ ತೀವ್ರ. ಯಾವ ಹುತ್ತದಲ್ಲಿ ಯಾವ ಹಾವೋ ಎಂದು ಕೈ ಹಾಕಲು ಹೆದರಿ ಕುಳಿತ ಉನ್ನತ ವ್ಯವಸ್ಥಾಪಕ ವರ್ಗದ ತಲೆಯ ಮೇಲೆ 'ನಾಳೆ ಏನು ?' ಎಂಬ ಪ್ರಶ್ನೆ ಡೆಮಾಕ್ಲೀಸನ ತೂಗುಕತ್ತಿಯಂತೆ ತೊನೆದಾಡುತ್ತಿದೆ. ಇದು ನೈಜಚಿತ್ರ.

### ಅಚ್ಚುಕಟ್ಟು—ಸಜ್ಜುಗಾರಿಕೆ

ಭಾರತದ ಬ್ಯಾಂಕಿಂಗ್ ವ್ಯವಸ್ಥೆಯನ್ನು ಪುನಶ್ಚೇತನ

ಗೊಳಿಸಬೇಕಾದರೆ ನಾವು ಈ ಬಗ್ಗೆ ಇನ್ನೂ ಆಳವಾಗಿ, ಇನ್ನೂ ವ್ಯಾಪಕವಾಗಿ ಚಿಂತನೆ ಹರಿಸಬೇಕಾದ್ದು ಅತ್ಯಗತ್ಯ. ಕಳೆದ ಹಲವು ದಶಕಗಳಲ್ಲಿ ಭಾರತೀಯ ಬ್ಯಾಂಕಿಂಗ್ ಬಹಳ ಮಟ್ಟಿಗೆ ಬೆಳೆದಿದೆಯೆಂಬುದು ನಿಜ. ರಾಷ್ಟ್ರೀಕರಣವಾದ ಮೇಲಂತೂ ಬ್ಯಾಂಕಿಂಗಿನ ಸ್ವರೂಪದಲ್ಲೇ ಸಾಗರಿಕ ಪರಿವರ್ತನೆಯಾಗಿರುವುದನ್ನು ಯಾರಾದರೂ ಕಾಣಬಹುದು. ವಿಶಿಷ್ಟೀಕರಣದ (ಸ್ಪೆಷಲೈಸೇಷನ್) ಜೊತೆಗೆ ಬ್ಯಾಂಕಿಂಗ್ ಚಟುವಟಿಕೆ ಹೊಸ ದಿಕ್ಕುಗಳಲ್ಲೂ ಮುನ್ನಡೆದಿದೆ. ಇದುವರೆಗೆ ಬ್ಯಾಂಕಿಂಗಿಗೆ ತಮ್ಮನ್ನು ತಾವೇ ತೆರೆದುಕೊಳ್ಳದಿದ್ದವರೆಲ್ಲ ಇಂದು ಬ್ಯಾಂಕಿಂಗಿನ ಸೇವೆ ಪಡೆಯುವಂತಾಗಿದೆ. ಭಾರತೀಯ ಜನಜೀವನದ ಎಲ್ಲ ಕ್ಷೇತ್ರಗಳನ್ನೂ ಪ್ರವೇಶಿಸಿರುವ ಬ್ಯಾಂಕು ಇಂದು ಮೈದಾಸನಂತೆ (ಆದರೆ ಒಳ್ಳೆಯ ಅರ್ಥದಲ್ಲಿ) ಮುಟ್ಟಿದ್ದನ್ನೆಲ್ಲಾ ಚಿನ್ನವಾಗಿ ಪರಿವರ್ತಿಸುವ ಹೊಣೆ ಹೊತ್ತಿದೆ. ಇದರ ಜೊತೆಗೆ, ಪಾಶ್ಚಾತ್ಯದೇಶಗಳಲ್ಲಿ ಬ್ಯಾಂಕಿಂಗ್ ಸೇವೆ ಪಡೆಯುತ್ತಿರುವ ಹೊಸ ಸಾಧನಗಳನ್ನೂ ಹೊಸ ಆಯಾಮಗಳನ್ನೂ ಅದು ಮರೆಯುವಂತಿಲ್ಲ, ಗಣಕದ ಪ್ರವೇಶವನ್ನು ಸ್ವಾಗತಿಸದಿರುವಂತಿಲ್ಲ. ಬ್ಯಾಂಕಿಂಗ್ ಸೇವೆಯ ಸ್ವರೂಪವೇ ಅಲ್ಲಿ ಬದಲಾಗಿದೆ. ಚೆಕ್ಕುಗಳು ಹೋಗಿ ಪ್ಲಾಸ್ಟಿಕ್ ಕಾರ್ಡುಗಳು, ಉದರಿ ಕಾರ್ಡುಗಳು ಬಂದುವು. ಈ ಕ್ರಾಂತಿಯೂ ಹಳತಾಯಿತು, ಗೃಹಗಣಕ ಜಾಲ (ಹೋಮ್ ಕಂಪ್ಯೂಟರ್ ನೆಟ್‌ವರ್ಕ್) ಬರುತ್ತಿದೆ. ಒಬ್ಬ ಗ್ರಾಹಕ ತನ್ನ ದಿವಾನಖಾನೆಯಲ್ಲಿ ಕುಳಿತು ತನ್ನ ಗೃಹಗಣಕದ ಗುಂಡಿಗಳನ್ನೊತ್ತಿ ಬಿಲ್ಲುಗಳ ಪಾವತಿ ಮಾಡುವುದು ಸಾಧ್ಯ. ನಮ್ಮಲ್ಲಿ ಬೀದಿಬೀದಿಗಳಲ್ಲೂ ಇರುವ ಅಂಚೆಪೆಟ್ಟಿಗೆಗಳಂತೆ ಸ್ಥಾಪಿತವಾಗಿರುವ ಯಂತ್ರಗಳ ಪೈಕಿ ಒಂದರಲ್ಲಿ ತನ್ನ ಪ್ಲಾಸ್ಟಿಕ್ ಕಾರ್ಡನ್ನು ಒಳನುಗ್ಗಿಸಿ, ತನಗೆ ಯಾವ ಮೌಲ್ಯವರ್ಗಗಳ (ಡಿನಾಮಿನೇಷನ್ಸ್) ನೋಟುಗಳು ಬೇಕೆಂಬುದನ್ನು ಸೂಚಿಸುವ ರಂಧ್ರಗಳನ್ನು ಕೊರೆದರೆ ಸಾಕು. ಕ್ಷಣಾರ್ಧದಲ್ಲಿ ಗ್ರಾಹಕನಿಗೆ ಬೇಕಾದ ಹಣ ಲಭ್ಯ. ಅಷ್ಟು ಮಾತ್ರವೇ ಅಲ್ಲ. ಅಗಾಧವಾಗಿ ಹಬ್ಬಿದ ಇಡೀ ಭೂಮಂಡಲವೇ ಇಂದು ಗ್ರಾಹಕನ ಕರಸ್ಥಲ ಲಿಂಗದಂತಾಗಿದೆ. ಅಂತರರಾಷ್ಟ್ರೀಯ ವ್ಯವಹಾರ ಹೊಂದಿರುವ ಯಾವನೇ ಗ್ರಾಹಕನಿಗೆ ಪ್ರಪಂಚದ ಯಾವಯಾವ ಮೂಲೆಯ ಯಾವಯಾವ ಸ್ಥಳದಲ್ಲಿ ಈ ಕ್ಷಣದ ವರೆಗೆ ಎಷ್ಟೆಷ್ಟು ಹಣ ಬಂದಿದೆ, ತನ್ನ ಖಾತೆಯಿಂದ ಎಷ್ಟೆಷ್ಟು ಸಂದಾಯವಾಗಿದೆ, ಶಿಲ್ಕು ಎಷ್ಟು ಇದೆ—ಎಲ್ಲವನ್ನೂ ಅವನು ಕುಳಿತಲ್ಲಿಂದಲೇ ಅರಿಯುವುದು ಸಾಧ್ಯ. ಗಣಕ ವ್ಯವಸ್ಥೆ ಅದನ್ನೆಲ್ಲ ವಿಚಾರಿಸಿ ವರದಿ ಮಾಡುತ್ತದೆ. ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವ, ಪ್ರಾ. ರಾಜಗೋಪಾಲ ಅವರು ಅನುವಾದಿಸಿರುವ, 'ಸ್ವಿಸ್ ಕ್ಯಾಷ್' ಎಂಬ ಲೇಖನ ಇದನ್ನು ನಮಗೆ ತಿಳಿಯಪಡಿಸುತ್ತದೆ. ಬ್ಯಾಂಕುಗಳು ನೀಡುತ್ತಿರುವ ಇನ್ನೊಂದು ಹೊಸ ಸೇವೆ 'ಅನುಪಾಶ್ರಯಣೀಕರಣ.' ಆ ಕುರಿತ ಅನುವಾದಿತ ಲೇಖನವೂ ಈ ಸಂಚಿಕೆಯಲ್ಲಿ ಪ್ರಕಟವಾಗಿದೆ. ಅಂತರರಾಷ್ಟ್ರೀಯ ಬ್ಯಾಂಕಿಂಗ್ ಎಷ್ಟು ವೇಗವಾಗಿ ಮುನ್ನಡೆಯುತ್ತಿದೆಯೆಂಬುದಕ್ಕೆ ಈ ಲೇಖನಗಳು ಸಾಕ್ಷಿ. ವ್ಯಾಪಕ ವಿಸ್ತರಣೆಯೊಂದಿಗೆ ಆಧುನೀಕರಣಕ್ಕೂ ಗಮನ ಹರಿಸಬೇಕಾದ ಭಾರತೀಯ ಬ್ಯಾಂಕಿಂಗು ಈ ವಿಚಾರದಲ್ಲಿ ಇನ್ನೂ ಬಹಳ ಹಿಂದೆಯೇ ಇದೆಯೆಂಬುದು ನಿರ್ವಿವಾದ. ವಂಚನೆ, ಅದಕ್ಷತೆ, ಅಕ್ರಮ, ಭ್ರಷ್ಟಾಚಾರಗಳನ್ನು ತಪ್ಪಿಸಬೇಕಾದರೆ, ಅವಕ್ಕೆ ಅವಕಾಶವಿಲ್ಲದಂಥ ಸುವ್ಯವಸ್ಥೆ, ತಾಂತ್ರಿಕ ಅಚ್ಚುಕಟ್ಟು, ಯಾಂತ್ರಿಕ ಸಜ್ಜುಗಾರಿಕೆ ಅತ್ಯವಶ್ಯವೆಂಬುದನ್ನು ಮರೆಯುವಂತಿಲ್ಲ.

## ಹೊಸ ದೃಷ್ಟಿಯ ನೇಮಕಾತಿ

ಇದುವರೆಗೂ ಮುಟ್ಟದಿದ್ದ ಹೊಸ ಹೊಸ ಕ್ಷೇತ್ರಗಳಲ್ಲಿ ಕಾರ್ಯಪ್ರವೃತ್ತವಾಗಿರುವ ಬ್ಯಾಂಕುಗಳ ನೈಪುಣ್ಯದ ವೃದ್ಧಿಗಾಗಿ ವಿಶಿಷ್ಟೀಕರಣವನ್ನೂ ಸಾಧಿಸಬೇಕಾಗಿದೆ. ಬ್ಯಾಂಕ್ ಸಿಬ್ಬಂದಿ ಈ ನಿಟ್ಟಿನಲ್ಲಿ ಪ್ರಗತಿ ಸಾಧಿಸಬೇಕಾಗಿದೆ. ಹೊಸದಾಗಿ ಸಿಬ್ಬಂದಿಯ ನೇಮಕ ಮಾಡುವಾಗ ಅಭ್ಯರ್ಥಿಗಳ ಕೇವಲ ಗುಮಾಸ್ತಿಕೆ ಸಾಮರ್ಥ್ಯ, ಲೆಕ್ಕ ಸಾಮರ್ಥ್ಯ, ತರ್ಕ ಸಾಮರ್ಥ್ಯ, ಭಾಷಾ ಸಾಮರ್ಥ್ಯ (ಅದೂ ಪರಕೀಯ ಭಾಷೆ) ಇಷ್ಟನ್ನು ಮಾತ್ರ ಪರೀಕ್ಷೆ ಮಾಡದೆ, ತ್ರಿವಿಕ್ರಮ ರೂಪ ತಳೆದಿರುವ ಬ್ಯಾಂಕಿಂಗಿನ ಸ್ವರೂಪದರ್ಶನ ಈ ಅಭ್ಯರ್ಥಿಗಳಿಗೆ ಎಷ್ಟರಮಟ್ಟಿಗೆ ಇದೆಯೆಂಬುದನ್ನು ಪರೀಕ್ಷಿಸುವ ಹೊಸ ವಿಧಾನವೊಂದು ರೂಪುಗೊಳ್ಳಬೇಕಾಗಿದೆ. ಬ್ರಿಟಿಷರು ಹಾಕಿಟ್ಟುಹೋದ ದೃಷ್ಟಿಯಿಂದಲೇ ಆಯ್ಕೆ ಮಾಡುವುದರಿಂದ, ಬ್ಯಾಂಕಿನಲ್ಲಿ ಕೆಲಸ ಮಾಡುವವರಿಗೆ ಕೂಡುವ ಕಳೆಯುವ ಲೆಕ್ಕ ಬಂದರೆ ಸಾಕೆಂದು ಭಾವಿಸುವುದರಿಂದ ಬ್ಯಾಂಕಿಂಗ್ ವಲಯದ ಇಂದಿನ ಅಗತ್ಯಗಳನ್ನು ಅಲಕ್ಷಿಸಿದಂತಾಗುತ್ತದೆ. ಇಂದು ಬ್ಯಾಂಕ್ ಉದ್ಯೋಗಿ ವಿಶೇಷ ದರ್ಶನ ಪಡೆದವನಾಗಿರಬೇಕಾಗುತ್ತದೆ, ಮಾನವೀಯ ಮೌಲ್ಯಗಳಿಗೆ ಸೊಪ್ಪುಹಾಕುವವನಾಗಿರಬೇಕಾಗುತ್ತದೆ. ಅವನಿಗೆ ಸಮಾಜ ವಿಜ್ಞಾನ ಮನೋವಿಜ್ಞಾನಗಳ ಅರಿವಿರಬೇಕಾಗುತ್ತದೆ. ಅವನು ಸೇವಾ ಮನೋಧರ್ಮವುಳ್ಳವನಾಗಿರಬೇಕಾಗುತ್ತದೆ, ಬ್ಯಾಂಕಿಂಗಿನ ಅಂತರಂಗದ ಅರಿವು ಉಳ್ಳವನಾಗಿರಬೇಕಾಗುತ್ತದೆ, ಜನರು ಆಡುವ ಭಾಷೆಯ, ಅವರ ಸಮಸ್ಯೆಗಳ ಪರಿಚಯವುಳ್ಳವನಾಗಿರ

ಬೇಕಾಗುತ್ತದೆ. ಈ ದೃಷ್ಟಿಯಿಂದ ನಮ್ಮ ಬ್ಯಾಂಕುಗಳ ನೇಮಕಾತಿ ಪರೀಕ್ಷೆಗಳನ್ನು ನಡಸುವುದು ಅತ್ಯವಶ್ಯ. ಅಲ್ಲದೆ ವಿದೇಶಿ ವಿನಿಮಯ, ಸಣ್ಣ ಕೈಗಾರಿಕೆ, ಕೃಷಿ ಬ್ಯಾಂಕಿಂಗ್, ಗ್ರಾಮೀಣ ಅಭಿವೃದ್ಧಿ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ವಿಶೇಷ ಪರಿಣತಿ ಪಡೆದ ಸಿಬ್ಬಂದಿಯ ಅಗತ್ಯ ಇಂದು ಎಂದಿಗಿಂತ ಹೆಚ್ಚಾಗಿದೆ. ಇದರತ್ತ ಗಮನ ಹರಿಸು ವುದೂ ಅವಶ್ಯ. ಭಾರತದಲ್ಲಿ ರೈಲ್ವೆಯನ್ನು ಬಿಟ್ಟರೆ ಬ್ಯಾಂಕಿಂಗಿನಲ್ಲಿರುವಷ್ಟು ಸಿಬ್ಬಂದಿ ಬೇರಾವ ಕ್ಷೇತ್ರದಲ್ಲೂ ಇಲ್ಲ. ಈ ಸಿಬ್ಬಂದಿಯ ಸಾಮರ್ಥ್ಯದ ಸಂಪೂರ್ಣ ಫಲ ದೇಶಕ್ಕೆ ದೊರಕುವಂತೆ ಮಾಡಬೇಕು. ಉತ್ಪಾದಕತೆ ಹೆಚ್ಚಿಸಬೇಕು. ಬ್ಯಾಂಕುಗಳ ಲಾಭಪ್ರದತೆಯ ಸಾಧನೆಗೆ ಇದು ಅಗತ್ಯ.

## ವ್ಯವಸ್ಥೆಯ ಪುನರ್‌ರಚನೆ

ಅದಕ್ಷತೆ, ಅವ್ಯವಹಾರಗಳ ನಿವಾರಣೆಗೆ ಸಂಬಂಧಿಸಿ ದಂತೆ ಇನ್ನೊಂದು ವಿಚಾರ. ನಮ್ಮ ಇಡೀ ಬ್ಯಾಂಕಿಂಗ್ ವ್ಯವಸ್ಥೆ ಇಂದು ತುಂಬಾ ಅವ್ಯವಸ್ಥಿತವಾಗಿದೆಯೆನಿಸು ತ್ತದೆ. ಭಾರತದ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿ ದಾಗ ಈ ಕ್ರಮದಿಂದ ಅವುಗಳ ಸ್ಪರ್ಧಾತ್ಮಕತೆ ನಾಶ ವಾಗುವುದೆಂದು ಅನೇಕರು ಅಂಜಿದ್ದರು. ಆದರೆ ಪ್ರತಿ ಯಾಗಿ ಸ್ಪರ್ಧೆ ಅತಿಯಾಗಿ ಬೆಳೆದಿವೆ. ಈ ಸ್ಪರ್ಧೆಯಿಂದ ಸೇವೆಯ ಗುಣಮಟ್ಟದಲ್ಲೇನೂ ಸುಧಾರಣೆಯಾಗಿಲ್ಲ. ಪ್ರತಿ ಯಾಗಿ ಒಂದರಿಂದ ಇನ್ನೊಂದು ಬ್ಯಾಂಕು, ಒಂದು ಶಾಖೆ ಯಿಂದ ಇನ್ನೊಂದು ಶಾಖೆ ಠೇವಣಿಗಳನ್ನು ಕಸಿಯುವ ಪ್ರವೃತ್ತಿ ಬೆಳೆದಿದೆ. ಗ್ರಾಹಕರೂ ಪರಿಸ್ಥಿತಿಯ ದುರುಪ ಯೋಗ ಪಡೆದುಕೊಳ್ಳುತ್ತಿದ್ದಾರೆ. ಒಂದು ಶಾಖೆಯಲ್ಲಿ ವ್ಯವಹಾರ ಕೆಟ್ಟು, ಸಾಲಗಳು ಅಂಟಂಟಾದಾಗ, ಆ ಶಾಖೆ ಯನ್ನು ಬಿಟ್ಟು ಇನ್ನೊಂದು ಶಾಖೆಯಲ್ಲಿ ಖಾತೆ ತೆರೆದು ಮತ್ತೆ ಹಳೆಯ ರೀತಿಯಲ್ಲೇ ವ್ಯವಹಾರದಲ್ಲಿ ತೊಡಗು ವುದುಂಟು. ಒಂದು ಬ್ಯಾಂಕ್ ಶಾಖೆ ಬಿಟ್ಟ ಗ್ರಾಹಕನನ್ನು ಇನ್ನೊಂದು ಶಾಖೆ ಸ್ವೀಕರಿಸುವ ಬಗ್ಗೆ ಯಾವ ಅಳುಕೂ ಇರುವುದಿಲ್ಲ. ಪ್ರಮುಖ ಬ್ಯಾಂಕುಗಳು ದೇಶದ ಎಲ್ಲೆಡೆ ಗಳಲ್ಲೂ ಶಾಖೆ ತೆರೆದು ನಿಯಂತ್ರಣದಲ್ಲಿ ತೊಡಕನ್ನು ತಂದು ಕೊಂಡಿವೆ. ಇದರಿಂದ ವಿರಳ ಸಂಪನ್ಮೂಲಗಳು ಪೋಲಾಗು ತ್ತಿವೆ. ಇವನ್ನೆಲ್ಲ ತಪ್ಪಿಸಲು ಇಡೀ ಬ್ಯಾಂಕಿಂಗ್ ವ್ಯವಸ್ಥೆ ಯನ್ನು ಪುನರ್‌ರಚಿಸುವ ಪ್ರಶ್ನೆ ಪದೇ ಪದೇ ಬಂದಿದೆ. 1972ರಷ್ಟು ಹಿಂದೆ ಬ್ಯಾಂಕಿಂಗ್ ಆಯೋಗ ಈ ಪ್ರಶ್ನೆಗೆ ಪರಿಹಾರವಾಗಿ ನಾಲ್ಕು ಸೂತ್ರಗಳನ್ನು ಪರಿಶೀಲಿಸಿತು. ಎಲ್ಲ ರಾಷ್ಟ್ರೀಕೃತ ಬ್ಯಾಂಕುಗಳನ್ನು ಒಂದುಗೂಡಿಸಿ ಇಡೀ ದೇಶಕ್ಕೆ ಒಂದೇ ರಾಷ್ಟ್ರೀಕೃತ ಬ್ಯಾಂಕಿಂಗ್ ಸಂಸ್ಥೆಯ ಸ್ಥಾಪನೆ ಒಂದು ಸೂತ್ರ. ಆದರೆ ಇದು ಅತಿಭಾರಿಯಾಗಿ ನಿರ್ವಹಣೆ ಅಸಾಧ್ಯವೆನಿಸುವುದೆಂಬುದು ಸ್ವಯಂವೇದ್ಯ. ಅಲ್ಲದೆ ಗ್ರಾಹಕರು ತಮಗೆ ಬೇಕಾದ ಬ್ಯಾಂಕನ್ನು ಆರಿಸಿಕೊಳ್ಳಲು ಅವಕಾಶ ಇರಬೇಕಾದ್ದು ಅವಶ್ಯ. ಬ್ಯಾಂಕುಗಳನ್ನು ಅವು ಗಳ ಕಾರ್ಯಭಾರಾನುಗುಣವಾಗಿ—ಉಳಿತಾಯ ಬ್ಯಾಂಕ್, ಸಣ್ಣ ಹಾಗೂ ಮಧ್ಯಮ ಗಾತ್ರಗಳ ಕೈಗಾರಿಕೆಗಳ ಬ್ಯಾಂಕ್, ವಿದೇಶಿ ವಿನಿಮಯ ಬ್ಯಾಂಕ್, ಕೃಷಿ ಬ್ಯಾಂಕ್ ಇತ್ಯಾದಿ— ಮರುವಿಂಗಡಣೆ ಮಾಡಬೇಕೆಂಬುದು ಎರಡನೆಯ ಸಲಹೆ. ಆದರೆ ಇದನ್ನು ಸಾಧಿಸಬೇಕಾದರೆ ಮೂಲಭೂತ ಬದಲಾ ವಣೆ ಅಗತ್ಯವಾಗುತ್ತದೆ. ರಾಷ್ಟ್ರೀಕೃತ ಬ್ಯಾಂಕುಗಳನ್ನೆಲ್ಲ ಒಂದುಗೂಡಿಸಿ ಒಟ್ಟು ಏಳೆಂಟು ಬ್ಯಾಂಕುಗಳಾಗಿ ಪುನರ್‌ರ ಚಿಸಬೇಕು ಎಂಬುದು ಮೂರನೆಯ ಸಲಹೆ. ಒಂದೊಂದು ಪ್ರದೇಶಕ್ಕೆ ಒಂದೊಂದು ಬ್ಯಾಂಕು ಇರಲಿ; ಎರಡು ಮೂರು ಬ್ಯಾಂಕುಗಳು ಮಾತ್ರ ಅಖಿಲ ಭಾರತೀಯ ವಾಗಿರಲಿ—ಎಂಬುದು ನಾಲ್ಕನೆಯ ಸಲಹೆ. ಆಯೋಗ ಮೂರನೆಯ ವಿಧಾನವನ್ನು ಶಿಫಾರಸು ಮಾಡಿತು.

ಎಲ್ಲ ಬ್ಯಾಂಕುಗಳನ್ನೂ ಅಖಿಲಭಾರತೀಯವಾಗಿ ಮಾಡಿ, ಅನೈತಿಕ ಸ್ಪರ್ಧೆಗೆ ಎಡೆಗೊಟ್ಟು, ವಿರಳ ಮಾನವ ಹಾಗೂ ಭೌತಿಕ ಸಂಪನ್ಮೂಲಗಳ ಪೋಲಿಗೆ ಅವಕಾಶ ನೀಡುವ ಬದಲು, ಪ್ರಾದೇಶಿಕವಾಗಿ ಬ್ಯಾಂಕುಗಳನ್ನು ಪುನರ್‌ರಚಿಸಬಹುದೆಂಬುದು ನಮ್ಮ ಅಭಿಪ್ರಾಯ. ಕೆಲವು ಅಖಿಲಭಾರತೀಯ ಬ್ಯಾಂಕುಗಳಿರಲಿ. ಅಥವಾ ಅಂಥ ಒಂದು ಬ್ಯಾಂಕ್ ಇದ್ದರೂ ಸಾಕು. ಅದನ್ನೂ ವಿಕೇಂದ್ರೀ ಕರಿಸಬೇಕು. ಪ್ರಾದೇಶಿಕ ಬ್ಯಾಂಕುಗಳಲ್ಲಿ, ಪ್ರಾದೇಶಿಕ ವಿಭಾಗಗಳಲ್ಲಿ ಆಯಾ ಪ್ರದೇಶಗಳವರಿಗೆ ಉದ್ಯೋಗ ನೀಡಿಕೆಯ ಬಗ್ಗೆ ಆದ್ಯತೆಯಿರಲಿ. ಆಯಾ ಪ್ರಾದೇಶಿಕ ಭಾಷೆಗೂ ಪ್ರಾಧಾನ್ಯವಿರಲಿ, ಆಗ ಮಾತ್ರ ಬ್ಯಾಂಕಿಂಗ್ ವ್ಯವಸ್ಥೆ ಜನಪರವಾದೀತು. ಅದಕ್ಕೆ ಒಪ್ಪಿಸಲಾದ ಅಗಾಧ ಹೊಣೆಗಾರಿಕೆಯನ್ನು ನಿರ್ವಹಿಸುವುದು ಸಾಧ್ಯವಾದೀತು. ಈ ಬಗೆಯ ಪುನರ್ವ್ಯವಸ್ಥೆಯತ್ತ ಗಮನ ಹರಿಸಬೇಕೆಂ ಬುದು ನಮ್ಮ ಅಭಿಮತ. ★

• • •

# ಬ್ಯಾಂಕರ್ ಮತ್ತು ಗ್ರಾಹಕ

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

## ಬ್ಯಾಂಕರ್, ಗ್ರಾಹಕ ಮತ್ತು ಇವರ ಸಂಬಂಧ ಕುರಿತಂತೆ ಕಾನೂನಿನ ದೃಷ್ಟಿಯಿಂದ ಒಂದು ಪರಿಶೀಲನೆ

ಬ್ಯಾಂಕು, ಬ್ಯಾಂಕರ್ ಮತ್ತು ಬ್ಯಾಂಕಿಂಗ್ ಈ ಮೂರು ಪದಗಳನ್ನು ಸಾಮಾನ್ಯವಾಗಿ ಸಮಾನ ಅರ್ಥದಲ್ಲಿ ಉಪಯೋಗಿಸಲಾಗುತ್ತದೆ. ಈಗ ಒಂದು ಬ್ಯಾಂಕು ನಡೆಸುವ ಎಲ್ಲ ಕಾರ್ಯಭಾರಗಳನ್ನೂ ಒಳಗೊಂಡಂತೆ ಒಂದು ಪರಿಪೂರ್ಣ ವ್ಯಾಖ್ಯೆಯನ್ನು ನೀಡುವುದು ಕಷ್ಟ. ಡಾ. ಹರ್ಬರ್ಟ್ ಎಲ್. ಹಾರ್ಟ್ 'ಬ್ಯಾಂಕರ್' ಪದವನ್ನು ಈ ರೀತಿ ವ್ಯಾಖ್ಯಿಸಿದ್ದಾರೆ: ಜನರಿಂದ ತಾನು ಪಡೆದ ಚಾಲ್ತಿ ಖಾತೆಗಳ ಠೇವಣಿ ಹಣದ ಮೇಲೆ ಅವರು ಚೆಕ್ಕುಗಳನ್ನು ಬರೆದಾಗ ಅವನ್ನು ತನ್ನ ವ್ಯವಹಾರದ ಯಥಾಕ್ರಮದಲ್ಲಿ ಆದರಿಸುವವನು ಬ್ಯಾಂಕರ್ ಎಂದು ಕರೆಯಲ್ಪಡುತ್ತಾನೆ.' 'ಮತ್ತೊಬ್ಬ ಬ್ರಿಟಿಷ್ ಲೇಖಕ ಸರ್ ಜಾನ್ ಪೇಜೆಟರ ಅಭಿಪ್ರಾಯದಲ್ಲಿ 'ಬ್ಯಾಂಕರ್ ಎಂದು ಕರೆಸಿಕೊಳ್ಳಬೇಕಾದರೆ ಒಬ್ಬ ವ್ಯಕ್ತಿ, ಒಂದು ಸಂಸ್ಥೆ ಅಥವಾ ಒಂದು ಕಂಪನಿ ಈ ಮುಂದಿನ ಕಾರ್ಯಭಾರಗಳನ್ನು ಮಾಡಬೇಕು.

1 ಠೇವಣಿ ಖಾತೆಗಳನ್ನು ಸ್ವೀಕರಿಸುವುದು

2 ಚಾಲ್ತಿ ಖಾತೆಗಳನ್ನು ಸ್ವೀಕರಿಸುವುದು

3 ಚೆಕ್ಕುಗಳನ್ನು ನೀಡುವುದು ಮತ್ತು ಅವುಗಳ ಮೇಲೆ ಹಣ ಪಾವತಿ ಮಾಡುವುದು ಮತ್ತು

4 ರೇಖಿತ ಮತ್ತು ಅರೇಖಿತ ಚೆಕ್ಕುಗಳ ಮೇಲೆ ತನ್ನ ಗ್ರಾಹಕರ ಪರವಾಗಿ ಹಣ ವಸೂಲು ಮಾಡುವುದು. ಈ ಕಾರ್ಯಗಳ ಜೊತೆಗೆ ತಾನು ಬ್ಯಾಂಕರ್ ಎಂದು ತನ್ನ ವ್ಯವಹಾರಗಳ ಮೂಲಕ ಘೋಷಿಸಿಕೊಳ್ಳಬೇಕು ಮತ್ತು ಸಾರ್ವಜನಿಕರು ಅವನಿಗೆ ಮನ್ನಣೆ ನೀಡಬೇಕು.

1949ರ ಭಾರತೀಯ ಬ್ಯಾಂಕಿಂಗ್ ಕಂಪನಿಗಳ ನಿಯಂತ್ರಣ ಅಧಿನಿಯಮದ ಪ್ರಕರಣ 5 (ಬಿ)ಯ ಪ್ರಕಾರ 'ಬ್ಯಾಂಕಿಂಗ್ ಎಂದರೆ ಸಾಲ ಕೊಡುವ ಅಥವಾ ಹೂಟೆಗಳನ್ನು ಕೊಳ್ಳುವ ಉದ್ದೇಶದಿಂದ ಸಾರ್ವಜನಿಕರಿಂದ ಹಣದ ಠೇವಣಿಗಳನ್ನು ಸ್ವೀಕರಿಸಿ, ಆ ಹಣವನ್ನು ಕೊಟ್ಟವರು ಚೆಕ್ಕು, ಡ್ರಾಫ್ಟ್ ಅಥವಾ ಆದೇಶಗಳ ಮೂಲಕ ತಮಗೆ ಬೇಕೆನಿಸಿದಾಗ ವಾಪಸು ಪಡೆಯುವಂತೆ ಮಾಡುವುದು. ಇದೇ ಅಧಿನಿಯಮದ ಪ್ರಕರಣ 5 (ಸಿ)ಯ ಪ್ರಕಾರ 'ಬ್ಯಾಂಕಿಂಗ್ ಕಂಪನಿ ಎಂದರೆ ಭಾರತದ ಯಾವುದೇ ರಾಜ್ಯದಲ್ಲಿ ಬ್ಯಾಂಕಿಂಗ್ ವ್ಯವಹಾರದಲ್ಲಿ ತೊಡಗಿರುವ ಕಂಪನಿ' ಎಂದಾಗುತ್ತದೆ.

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ, ಅಧ್ಯಾಪಕರು, ಡಿ. ಬನುಮಯ್ಯ ಕಾಲೇಜು, ಮೈಸೂರು ೫೭೦ ೦೦೧

ಪ್ರಕರಣ 5 (ಬಿ)ಯಲ್ಲಿ ಹೇಳಿರುವ ಪ್ರಮುಖ ಕಾರ್ಯಭಾರಗಳ ಜೊತೆಗೆ ಪ್ರಕರಣ 6ರ ಪ್ರಕಾರ ಒಂದು ಬ್ಯಾಂಕಿಂಗ್ ಕಂಪನಿ ಈ ಮುಂದಿನ ಯಾವುದೇ, ಯಾವುವೇ ಅಥವಾ ಎಲ್ಲ ವ್ಯವಹಾರಗಳಲ್ಲಿ ತೊಡಗಬಹುದು :

1 ಹುಂಡಿಗಳು, ವಚನಪತ್ರಗಳು, ಡ್ರಾಫ್ಟುಗಳು, ಕೂಪನ್ನುಗಳು, ಪ್ರಮಾಣಪತ್ರಗಳು, ಮತ್ತಿತರ ಸಂಲೇಖಗಳು ಹಾಗೂ ಪ್ರತಿಭೂತಿಗಳನ್ನು ಕೊಳ್ಳುವುದು, ಮಾರುವುದು, ವಟಾಯಿಸುವುದು ಇತ್ಯಾದಿ ವ್ಯವಹಾರಗಳು ;

2 ಪ್ರವಾಸಿ ಚೆಕ್ಕು ಮತ್ತು ಉದರಿ ಪತ್ರಗಳನ್ನು ನೀಡುವುದು;

3 ಚಿನ್ನ ಮತ್ತು ವಿದೇಶಿ ಹಣವನ್ನು ಕೊಳ್ಳುವುದು ಮತ್ತು ಮಾರುವುದು ;

4 ಷೇರುಗಳು, ಸ್ಟಾಕುಗಳು, ಸಾಲಪತ್ರಗಳು ಮತ್ತಿತರ ವಿನಿಯೋಜನೆಗಳಲ್ಲಿ ಗ್ರಾಹಕರ ಪರವಾಗಿ ವ್ಯವಹರಿಸುವುದು ;

5 ಆಭರಣಗಳು ಹಾಗೂ ಇತರ ಬೆಲೆಬಾಳುವ ವಸ್ತುಗಳನ್ನು ಭದ್ರ ಸುಪರ್ದಿನಲ್ಲಿ ಇಟ್ಟುಕೊಳ್ಳುವುದು ;

6 ಸರ್ಕಾರ, ಸ್ಥಳೀಯ ಸಂಸ್ಥೆಗಳು ಅಥವಾ ವ್ಯಕ್ತಿಗಳ ಮುತಾಲಿಕನಾಗಿ ಕಾರ್ಯ ನಿರ್ವಹಿಸುವುದು ; ಮತ್ತು

7 ತನ್ನ ಗ್ರಾಹಕರ ನ್ಯಾಸಧಾರಿ ಅಥವಾ ನಿಷ್ಪಾದಕನಾಗಿ ಕಾರ್ಯ ನಿರ್ವಹಿಸುವುದು, ಇತ್ಯಾದಿ.

ಮೇಲಿನ ವ್ಯವಹಾರಗಳನ್ನು ಬ್ಯಾಂಕಿನ ಪೂರಕ ಕಾರ್ಯಭಾರಗಳು ಎಂದು ಕರೆಯಲಾಗಿದೆ.

### ಬ್ಯಾಂಕಿನ ಗ್ರಾಹಕ

ಸಾಧಾರಣವಾಗಿ, ಬ್ಯಾಂಕಿನಲ್ಲಿ ಒಂದು ಠೇವಣಿ ಖಾತೆ ತೆರೆದು ಅದರೊಡನೆ ವ್ಯವಹರಿಸುವ ವ್ಯಕ್ತಿ ಅಥವಾ ಸಂಸ್ಥೆಯನ್ನು ಆ ಬ್ಯಾಂಕಿನ ಗ್ರಾಹಕ ಎಂದು ಹೇಳಬಹುದು. ಸರ್ ಜಾನ್ ಪೇಜೆಟರ ಪ್ರಕಾರ, ಒಂದು ಬ್ಯಾಂಕಿನ ಗ್ರಾಹಕ ಎನಿಸಿಕೊಳ್ಳಬೇಕಾದರೆ ಒಬ್ಬ ವ್ಯಕ್ತಿ ಎರಡು ನಿಯಮಗಳನ್ನು ಪಾಲಿಸಬೇಕು—1 ಆತನ ಮತ್ತು ಬ್ಯಾಂಕಿನ ನಡುವೆ ವ್ಯವಹಾರ ನಡೆಸುವ ಪರಿಪಾಠವಿರಬೇಕು ; ಮತ್ತು 2 ಈ ವ್ಯವಹಾರ ಬ್ಯಾಂಕಿಂಗ್ ವ್ಯವಹಾರದ ಬಗೆಯಲ್ಲಿರಬೇಕು. ಪೇಜೆಟರ ಅಭಿಪ್ರಾಯದಲ್ಲಿ ಕೇವಲ ಒಂದು ವಹಿವಾಟನ್ನು ನಡೆಸುವವನನ್ನು ಬ್ಯಾಂಕಿನ ಗ್ರಾಹಕ ಎನ್ನಲು ಸಾಧ್ಯವಿಲ್ಲ. ಒಂದು ಅವಧಿಯವರೆಗೆ ಅಥವಾ ನಿರಂತರವಾಗಿ ವ್ಯವಹಾರನಡೆಸುವ ಪರಿಪಾಠ

ವುಳ್ಳವನು ಮಾತ್ರ ಗ್ರಾಹಕ ಎನಿಸಿಕೊಳ್ಳುತ್ತಾನೆ. ಪೇಜಿಟರ ಈ ನಿಯಮವನ್ನು 'ಅವಧಿ ತತ್ವ' ಎಂದು ಕರೆಯಲಾಗಿದೆ. ಮುಂದೆ ಅನೇಕ ಮೊಕದ್ದಮೆಗಳಲ್ಲಿ ನ್ಯಾಯಮೂರ್ತಿಗಳು ಪೇಜಿಟರ ಅವಧಿ ತತ್ವವನ್ನು ಖಂಡಿಸಿದ್ದಾರೆ. ಬ್ಯಾಂಕರ್-ಗ್ರಾಹಕ ಸಂಬಂಧ ಮೊದಲ ಚೆಕ್ಕನ್ನು ಗ್ರಾಹಕ ಠೇವಣಿಗೆ ಕೊಟ್ಟಾಗಲೇ ಪ್ರಾರಂಭವಾಗುತ್ತದೆ. ಬ್ಯಾಂಕರನೊಡನೆ ಗ್ರಾಹಕನ ವ್ಯವಹಾರ ಸಂಬಂಧದ ಅವಧಿ ಎಷ್ಟೇ ಇರಲಿ ಅದು ಮುಖ್ಯವಲ್ಲ. ಬ್ಯಾಂಕರ್ ಗ್ರಾಹಕನ ಹಣವನ್ನು ಸ್ವೀಕರಿಸಿ, ಆತ ಚೆಕ್ಕುಗಳನ್ನು ಬರೆದಾಗ, ಆತನ ಖಾತೆಯಲ್ಲಿ ಹಣದ ಶಿಲ್ಕು ಇರುವವರೆಗೆ ಅವುಗಳನ್ನು ಆದರಿಸಲು ಒಪ್ಪಿಕೊಂಡಲ್ಲಿ, ಅಂಥ ಖಾತೆಯನ್ನು ತೆರೆದ ಕ್ಷಣದಿಂದಲೇ ಅವನು ಗ್ರಾಹಕ ಎನಿಸಿಕೊಳ್ಳುತ್ತಾನೆ. ಈ ಅಭಿಪ್ರಾಯಗಳನ್ನು, ಲ್ಯಾಡ್ ಬ್ರೋಕ್ ವಿ. ಟಾಡ್ (1914), ಕಮಿಷನರ್ ಆಫ್ ಟ್ಯಾಕ್ಸೇಷನ್ ವಿ. ಇಂಗ್ಲಿಷ್, ಸ್ಕಾಟಿಷ್ ಮತ್ತು ಆಸ್ಟ್ರೇಲಿಯನ್ ಬ್ಯಾಂಕ್ (1920) ಮತ್ತು ಗೋಪಿನಾಥ್ ನಾಯರ್ ವಿ. ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ (1970) ಮೊಕದ್ದಮೆಗಳಲ್ಲಿ ನ್ಯಾಯಮೂರ್ತಿಗಳು ವ್ಯಕ್ತಪಡಿಸಿದ್ದಾರೆ.

ಪೇಜಿಟರ ಎರಡನೆಯ ನಿಯಮ ಎಲ್ಲರೂ ಒಪ್ಪುವಂಥದೇ. ಗ್ರಾಹಕ ಎನಿಸಿಕೊಳ್ಳಬೇಕಾದರೆ ಬ್ಯಾಂಕಿಂಗ್ ವ್ಯವಹಾರ ನಡಸದೆ, ಸಾಧಾರಣ ವ್ಯವಹಾರ ನಡೆಸಿದರೆ ಸಾಲದು. ನೋಟುಗಳಿಗೆ ಚಿಲ್ಲರೆ ಪಡೆಯುವುದು, ಇತರರು ತನಗೆ ನೀಡಿದ ಚೆಕ್ಕುಗಳ ಮೇಲೆ ಹಣ ಪಡೆಯುವುದು, ಅಮೂಲ್ಯ ವಸ್ತುಗಳನ್ನು ಭದ್ರ ಸುಫರ್ದಿನಲ್ಲಿಡುವುದು ಅಥವಾ ಗೆಳೆಯರನ್ನು ನೋಡಲು ಬ್ಯಾಂಕಿಗೆ ಹೋಗುವುದು, ಇದೆಲ್ಲ ಬ್ಯಾಂಕಿಂಗ್ ವ್ಯವಹಾರ ಎನಿಸಿಕೊಳ್ಳುವುದಿಲ್ಲ.

### ಬ್ಯಾಂಕರ್-ಗ್ರಾಹಕ ಸಂಬಂಧ

ಬ್ಯಾಂಕಿನಲ್ಲಿ ಒಂದು ಖಾತೆಯನ್ನು ತೆರೆದ ಕೂಡಲೆ ಬ್ಯಾಂಕರನಿಗೂ ಗ್ರಾಹಕನಿಗೂ ಕರಾರುಬದ್ಧ ಸಂಬಂಧ ಅಸ್ತಿತ್ವಕ್ಕೆ ಬರುತ್ತದೆ. ಈ ಸಂಬಂಧವನ್ನು ಎರಡು ಪ್ರಮುಖ ಶೀರ್ಷಿಕೆಗಳಲ್ಲಿ ವಿವರಿಸಬಹುದು :

1 ಸಾಮಾನ್ಯ ಸಂಬಂಧ
2 ವಿಶೇಷ ಸಂಬಂಧ

ಬ್ಯಾಂಕರ್-ಗ್ರಾಹಕ ಸಂಬಂಧದ ಸಾಮಾನ್ಯ ಲಕ್ಷಣಗಳು ಇವು : ಬ್ಯಾಂಕರ್ ಮತ್ತು ಗ್ರಾಹಕನಿಗೆ ಇರುವ ಸಂಬಂಧ ಋಣಿ-ಧನಿ ರೀತಿಯದು. ಒಬ್ಬ ವ್ಯಕ್ತಿ ಬ್ಯಾಂಕಿನಲ್ಲಿ ಖಾತೆ ತೆರೆದು ಹಣವನ್ನು ಠೇವಣಿ ಇಟ್ಟಾಗ ಬ್ಯಾಂಕರ್ ಆ ಹಣವನ್ನು ಹಾಗೆಯೇ ಇಡುವುದಿಲ್ಲ. ಆದ್ದರಿಂದ ಬ್ಯಾಂಕರನನ್ನು ನ್ಯಾಸಧಾರಿ ಎಂದು ಕರೆಯುವುದು ತಪ್ಪಾಗುತ್ತದೆ. ಗ್ರಾಹಕನಿಂದ ಠೇವಣಿಯಾಗಿ ಪಡೆದ ಹಣವನ್ನು ಬ್ಯಾಂಕರ್ ತನಗೆ ಇಷ್ಟಬಂದಂತೆ ಸಾಲ ಕೊಡಲು ಅಥವಾ ವಿನಿಯೋಜನೆಗಳನ್ನು ಕೊಳ್ಳಲು ಬಳಸಬಹುದು. ಪೇಜಿಟರ ಅಭಿಪ್ರಾಯದಲ್ಲಿ 'ಬ್ಯಾಂಕರ್-ಗ್ರಾಹಕ ಸಂಬಂಧ ಮೂಲಭೂತವಾಗಿ, ಋಣಿ-ಧನಿ ಸಂಬಂಧದ ರೀತಿಯದು ; ಋಣಿ ಯಾರು, ಧನಿ ಯಾರು ಎಂಬುದು ಠೇವಣಿ ಖಾತೆಯ ಸ್ಥಿತಿಯನ್ನು ಅವಲಂಬಿಸಿರುತ್ತದೆ.' ಗ್ರಾಹಕನೊಬ್ಬ ರೂ. 1000 ಠೇವಣಿ ಇಟ್ಟಾಗ ಆ ಮೊಬಲಗಿಗೆ ಸಮನಾಗಿ ಬ್ಯಾಂಕರ್ ಗ್ರಾಹಕನಿಗೆ ಋಣಿಯಾಗುತ್ತಾನೆ. ಮುಂದೆ ಇದೇ ಗ್ರಾಹಕ ತನ್ನ ಚಾಲ್ತಿ ಖಾತೆಯನ್ನು ಮಿತಿಮೀರಿಳೆದಾಗ ಅವನು ಋಣಿಯಾಗಿ, ಬ್ಯಾಂಕರ್ ಧನಿಯಾಗುತ್ತಾನೆ. ಗ್ರಾಹಕ ಬ್ಯಾಂಕಿನಲ್ಲಿ ಖಾತೆ ತೆರೆದು ಠೇವಣಿಯಾಗಿಟ್ಟ ಹಣದ ಮೇಲೆ ಬ್ಯಾಂಕಿಗೆ ಸಂಪೂರ್ಣ ಅಧಿಕಾರ ಇದೆ. ಆದರೆ ಗ್ರಾಹಕ ತನ್ನ ಖಾತೆಯ ಶಿಲ್ಕಿನ ಮೇಲೆ ಚೆಕ್ಕು ಬರೆದು ಹಣ ಹಿಂಪಡೆಯಲು ಅಪೇಕ್ಷಿಸಿದಾಗ ಅದನ್ನು ಆದರಿಸಬೇಕಾದ್ದು ಬ್ಯಾಂಕರನ ಕರ್ತವ್ಯ. ಗ್ರಾಹಕನಿಂದ ಚೆಕ್ ಮೂಲಕ ತಗಾದೆ ಬರುವವರೆಗೆ ಅವನ ಹಣವನ್ನು ಬ್ಯಾಂಕರ್ ಹಿಂದಿರುಗಿಸಬೇಕಾಗಿಲ್ಲ. ಮುದ್ದತಿ ಠೇವಣಿಯಲ್ಲಿಟ್ಟ ಹಣವನ್ನು ನಿರ್ದಿಷ್ಟ ಅವಧಿ ಮುಗಿದ ಅನಂತರ ಬ್ಯಾಂಕರ್ ಹಿಂದಿರುಗಿಸಬೇಕಾಗುತ್ತದೆ.

ಬ್ಯಾಂಕರ್ ಗ್ರಾಹಕನ ಮುತಾಲಿಕನಾಗಿ ಕಾರ್ಯ ನಿರ್ವಹಿಸುತ್ತಾನೆ. ಗ್ರಾಹಕನ ಪರವಾಗಿ ಹಣ ಪಾವತಿ ಮತ್ತು ಹಣ ವಸೂಲಿ ಕಾರ್ಯಗಳನ್ನು ಬ್ಯಾಂಕರ್ ಮಾಡುತ್ತಾನೆ. ಅಮೂಲ್ಯ ವಸ್ತುಗಳು, ಅತಿ ಮುಖ್ಯವಾದ ಕಾಗದ ಪತ್ರಗಳನ್ನು ತನ್ನಲ್ಲಿ ಭದ್ರ ಸುಫರ್ದಿನಲ್ಲಿ ಇಟ್ಟುಕೊಳ್ಳುವ ಬ್ಯಾಂಕರ್ ನ್ಯಾಸಧಾರಿಯ ಸ್ಥಾನದಲ್ಲಿರುತ್ತಾನೆ. ಈ ವಸ್ತುಗಳು ತನ್ನ ಕೈಗೆ ಬರುವಾಗ ಇದ್ದ ಸ್ಥಿತಿಯಲ್ಲಿಯೇ ಠೇವಣಿದಾರನಿಗೆ ಹಿಂದಿರುಗಿಸಬೇಕಾದುದು ಬ್ಯಾಂಕರನ ಕರ್ತವ್ಯ.

### ವಿಶೇಷ ಸಂಬಂಧ

ಖಾತೆಗಳ ಉತ್ತಾರ : ಒಬ್ಬ ಗ್ರಾಹಕ ಒಂದೇ ಬ್ಯಾಂಕಿನಲ್ಲಿ ಒಂದಕ್ಕಿಂತ ಹೆಚ್ಚು ಖಾತೆ ತೆರೆದಿದ್ದರೆ ಈ ಖಾತೆಗಳನ್ನು ಒಟ್ಟುಗೂಡಿಸುವ ಹಕ್ಕು ಬ್ಯಾಂಕಿಗೆ ಇದೆಯೇ ಎಂಬುದರ ಬಗ್ಗೆ ಹಿಂದೆ ಭಿನ್ನಾಭಿಪ್ರಾಯಗಳಿದ್ದುವು. 1872ರ ಗಾರ್ನೆಟ್ ವಿ. ಮ್ಯಾಕರ್ ಮನ್ ಮೊಕದ್ದಮೆಯಲ್ಲಿ ತೀರ್ಮಾನವಾದಂತೆ, ತನ್ನಲ್ಲಿರುವ ಒಬ್ಬ ಗ್ರಾಹಕನ ಎರಡು ಅಥವಾ ಹೆಚ್ಚಿನ ಖಾತೆಗಳನ್ನು ಒಂದುಗೂಡಿಸುವ ಹಕ್ಕನ್ನು ಬ್ಯಾಂಕರ್ ಪಡೆದಿದ್ದಾನೆಂದು ತಿಳಿಯಲಾಗಿತ್ತು. ಮುಂದೆ 1924ರಲ್ಲಿ ಗ್ರೀನ್‌ಹಾಲ್ ವಿ. ಯೂನಿಯನ್ ಬ್ಯಾಂಕ್ ಆಫ್ ಮ್ಯಾಂಚೆಸ್ಟರ್ ಮೊಕದ್ದಮೆಯಲ್ಲಿ ನ್ಯಾಯಮೂರ್ತಿಗಳು 'ಬ್ಯಾಂಕರ್ ಎರಡು ಅಥವಾ ಹೆಚ್ಚಿನ ಖಾತೆಗಳನ್ನು ಒಬ್ಬ ಗ್ರಾಹಕನ ಹೆಸರಿನಲ್ಲಿ ತೆರೆಯುವುದಕ್ಕೆ ಒಪ್ಪಿಕೊಂಡಾಗ ಅವನು ಆ ಖಾತೆಗಳನ್ನು ಪ್ರತ್ಯೇಕವಾಗಿಡುವ ಸಮ್ಮತಿಯನ್ನು ಸೂಚಿಸುತ್ತದೆ' ಎಂದು ತೀರ್ಪಿತ್ತರು. ಈ ರೀತಿ ಭಿನ್ನವಾದ ಅಭಿಪ್ರಾಯಗಳಿರುವುದರಿಂದ, ಬ್ಯಾಂಕರ್ ಗ್ರಾಹಕನ ಒಪ್ಪಿಗೆ ಪಡೆದು ಖಾತೆಗಳನ್ನು ಉತ್ತಾರ ಹಾಕಬಹುದು. ಉತ್ತಾರ ಹಾಕುವುದು ಎಂದರೆ, ಬ್ಯಾಂಕರನಿಗೆ ಗ್ರಾಹಕನಿಂದ ಬರಬೇಕಾದ ಹಣವನ್ನು ಅವನ ಒಂದು ಖಾತೆಯಲ್ಲಿರುವ ಧನಿ ಶಿಲ್ಕಿನಲ್ಲಿ ವಜಾ ಮಾಡಿ ನಿವ್ವಳ ಶಿಲ್ಕನ್ನು ತೋರಿಸುವುದು. ಆದರೆ ಈ ಉತ್ತಾರ ಹಾಕುವ ಹಕ್ಕಿಗೆ ವಿರುದ್ಧವಾಗಿ ಬ್ಯಾಂಕರ್ ಮತ್ತು ಗ್ರಾಹಕನ ನಡುವೆ ಒಪ್ಪಂದ ಇರಬಾರದು ; ಮತ್ತು ಗ್ರಾಹಕನ ಎರಡು ಅಥವಾ ಹೆಚ್ಚಿನ ಖಾತೆಗಳ ಹಕ್ಕುಬಾಧ್ಯತೆಗಳಲ್ಲಿ ಏಕರೂಪತೆ ಇರಬೇಕು. ಉದಾ : ಒಬ್ಬ ಗ್ರಾಹಕನ ಸ್ವಂತ ಖಾತೆಗೂ ಅದೇ ಗ್ರಾಹಕ ಪಾಲುದಾರನಾಗಿ ಅಥವಾ ನ್ಯಾಸಧಾರಿಯಾಗಿ ವ್ಯವಹರಿಸುತ್ತಿರುವ ಇನ್ನೊಂದು ಖಾತೆಗೂ ಬ್ಯಾಂಕರ್ ಉತ್ತಾರ ಹಾಕಲು ಬರುವುದಿಲ್ಲ.

### ಗ್ರಾಹಕರ ಚೆಕ್ಕುಗಳ ಆದರ

ಚಾಲ್ತಿ ಹಾಗೂ ಉಳಿತಾಯ ಠೇವಣಾತಿಗಳಲ್ಲಿ ಹಣ ಇಟ್ಟಿರುವ ಗ್ರಾಹಕರ ಚೆಕ್ಕುಗಳನ್ನು ಆದರಿಸಬೇಕಾದ್ದು ಬ್ಯಾಂಕರನ ಕರ್ತವ್ಯ. ಹೀಗೆ ಚೆಕ್ಕುಗಳನ್ನು ಆದರಿಸುವ ವಿಷಯದಲ್ಲಿ ಬ್ಯಾಂಕರ್ ಕೆಳಕಂಡ

ವಿಷಯಗಳಿಗೆ ಗಮನ ನೀಡಬೇಕು.

ಅ) ಚೆಕ್ಕು ಬರವಣಿಗೆ ಸರಿಯಾಗಿರಬೇಕು. ದಿನಾಂಕ, ಪ್ರಾಪ್ತಿ ಕರ್ತನ ಹೆಸರು, ಮೊಬಲಗು (ಅಕ್ಷರಗಳಲ್ಲಿ ಮತ್ತು ಅಂಕಿಗಳಲ್ಲಿ) ಮತ್ತು ಖಾತೆದಾರನ ಸಹಿ ಇವೆಲ್ಲ ಬ್ಯಾಂಕರನಿಗೆ ತೃಪ್ತಿಕರವಾಗಿ ಕಂಡುಬಂದಲ್ಲಿ ಮಾತ್ರ ಚೆಕ್ಕನ್ನು ಆದರಿಸಲು ಅವನು ಬದ್ಧ. ದಿನಾಂಕ ವಿಲ್ಲದ ಅಥವಾ ಅನಾಗತ ದಿನಾಂಕದ ಚೆಕ್ಕುಗಳನ್ನು ಅವನು ಆದರಿಸ ಬೇಕಾಗಿಲ್ಲ. ಅಂತೆಯೇ ಕಾಲಾತೀತ ಅಥವಾ ಹಳಸಿದ ಚೆಕ್ಕು ಬ್ಯಾಂಕರನಿಂದ ಹಣ ಪಡೆಯಲು ಅರ್ಹವಲ್ಲ. ಭಾರತೀಯ ಪರ ಕ್ರಾಮ್ಯ ಸಂಲೇಖಗಳ ಅಧಿನಿಯಮದ ಪ್ರಕಾರ ಒಂದು ಕ್ರಮಬದ್ಧ ಚೆಕ್ಕಿಗೆ ರಚಕ, ಪ್ರಾಪ್ತಿಕರ್ತ ಮತ್ತು ಸ್ವೀಕರ್ತ ಎಂಬ ಮೂವರು ಕಕ್ಷಿಗಳಿರುತ್ತಾರೆ. ಚೆಕ್ಕಿನ ಮೊಬಲಗು ಅಕ್ಷರ ಮತ್ತು ಅಂಕಿಗಳಲ್ಲಿ ಒಂದೇ ಇರಬೇಕು. ರಚಕ ಖಾತೆ ತೆರೆಯುವಾಗ ಬ್ಯಾಂಕಿಗೆ ಕೊಟ್ಟಿ ರುವ ಮಾದರಿ ಸಹಿಗೆ ರಚಕನ ಸಹಿ ಅನುಗುಣವಾಗಿರಬೇಕು.

ಆ) ಚೆಕ್ಕನ್ನು ಆದರಿಸಲು ಗ್ರಾಹಕನ ಖಾತೆಯಲ್ಲಿ ಸಾಕಷ್ಟು ಶಿಲ್ಕು ಇರಬೇಕು, ಅಥವಾ ಅವನು ತನ್ನ ಖಾತೆಯಲ್ಲಿ ಮೀರಳೆತ ಮಾಡಲು ಮೊದಲೇ ಬ್ಯಾಂಕರನ ಒಪ್ಪಿಗೆ ಪಡೆದಿರಬೇಕು.

ಇ) ಚೆಕ್ಕನ್ನು ಪಡೆದವನು ಅದರ ಮೇಲಿರುವ ತಾರೀಖಿನಿಂದ ಸಕಾರಣ ಸಮಯದೊಳಗೆ ಅದನ್ನು ಬ್ಯಾಂಕಿಗೆ ಹಾಜರ್ಪಡಿಸಿ ಹಣ ಪಡೆಯಬೇಕು. ಸಕಾರಣ ಸಮಯ ಎಂಬುದಕ್ಕೆ ಯಾವ ಅಧಿನಿಯಮ ದಲ್ಲೂ ವಿವರಣೆ ಇಲ್ಲ. ನಮ್ಮ ದೇಶದಲ್ಲಿರುವ ರೂಢಿಯಂತೆ ಸಾಮಾನ್ಯ ವಾಗಿ ಒಂದು ಚೆಕ್ಕು ಅದರ ಮೇಲಿನ ದಿನಾಂಕದಿಂದ ಆರು ತಿಂಗಳ ವರೆಗೆ ಚಲಾವಣೆಯಲ್ಲಿರುತ್ತದೆ.

ಈ ಹಣ ವಸೂಲಿಗಾಗಿ ಬ್ಯಾಂಕಿಗೆ ಕೊಟ್ಟಿರುವ ಚೆಕ್ಕು ಮತ್ತಿತರ ಸಂಲೇಖಗಳ ಮೇಲೆ ಹಣ ವಸೂಲ್ಮಾಡಿ ಗ್ರಾಹಕನ ಖಾತೆಗೆ ಜಮಾ ಮಾಡಲು ಬಾ ಂಕಿಗೆ ಸಾಕಷ್ಟು ಕಾಲಾವಕಾಶವಿರಬೇಕು.

ಬ್ಯಾಂಕರ್ ತನ್ನ ಗ್ರಾಹಕನ ಚೆಕ್ಕುಗಳನ್ನು ಉಪೇಕ್ಷೆಯಿಂದ ಅನಾದರಿಸಿದಾ ಗ ಅವನಿಗೆ ತುಂಬಿಕೊಡಬೇಕಾದ ನಷ್ಟ ಚೆಕ್ಕಿನ ಮೊಬಲಗಿಗೆ ಸಮನಾಗಿರಬೇಕು ಎಂಬ ನಿಯಮವಿಲ್ಲ. 'ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು' ಎಂಬ ಗಾದೆ ಇಲ್ಲಿ ಸರಿಹೊಂದುತ್ತದೆ. ಗ್ರಾಹಕನಿಗೆ ಹಣದ ರೂಪದಲ್ಲಿ ಆಗುವ ನಷ್ಟ ಕ್ಕಿಂತ ಮಾನಹಾನಿ, ವಿಶ್ವಾಸಹಾನಿ ಹೆಚ್ಚಾಗುವುದರಿಂದ, ಅನಾದರಣೆ ಯಾದ ಚೆಕ್ಕಿನ ಮೊಬಲಗು ಕಡಿಮೆ ಇದ್ದಷ್ಟೂ, ಬ್ಯಾಂಕರ್ ತುಂಬಿ ಕೊಡಬೇಕಾದ ನಷ್ಟ ಹೆಚ್ಚಾಗಿರಬಹುದು.

## ಬ್ಯಾಂಕರನ ಧರಣಾಧಿಕಾರ

ಗ್ರಾಹಕನೊಡನೆ ತನ್ನ ಸಂಬಂಧದಲ್ಲಿ ಬ್ಯಾಂಕರನಿಗೆ ಇರುವ ವಿಶೇಷ ಹಕ್ಕೆಂದರೆ ಧರಣಾಧಿಕಾರ. ಇದರ ಪ್ರಕಾರ, ಗ್ರಾಹಕನಿಂದ ತನಗೆ ಬರಬೇಕಾದ ಹಣಕ್ಕಾಗಿ ಬ್ಯಾಂಕು ತನ್ನಲ್ಲಿರುವ ಆತನ ಎಲ್ಲ ಸ್ವತ್ತು ಗಳು, ಸಾಲಪತ್ರಗಳು, ಷೇರುಗಳು, ಹುಂಡಿಗಳು ಮೊದಲಾದವುಗಳ ಮೇಲೆ ಧರಣಾಧಿಕಾರವನ್ನು ಚಲಾಯಿಸಬಹುದು. ಈ ಹಕ್ಕು ಚಲಾಯಿಸಲು ಸ್ವತ್ತು ಮತ್ತು ವಿನಿಯೋಜನೆಗಳು ಮಾಮೂಲು ಬ್ಯಾಂಕಿಂಗ್ ವ್ಯವಹಾರದಲ್ಲಿ ಬ್ಯಾಂಕರನ ವಶಕ್ಕೆ ಬಂದಿರಬೇಕು. ಬ್ಯಾಂಕರನ ಧರಣಾಧಿಕಾರದಲ್ಲಿ ಗಿರವಿ ಅಥವಾ ಅಡಮಾನದ ಲಕ್ಷಣ ಗಳಿವೆ. ಇದರ ಪ್ರಕಾರ, ತನ್ನ ಹಣ ಬರುವವರೆಗೆ ಸ್ವತ್ತುಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವುದಲ್ಲದೆ, ಗ್ರಾಹಕನಿಗೆ ಸೂಕ್ತ ತಿಳುವಳಿಕೆ ಕೊಟ್ಟ ಅನಂತರ ಅವನ್ನು ಮಾರಿ ತನ್ನ ಹಣ ವಾಪಸ್ಸು ಪಡೆಯಬಹುದು. ಗ್ರಾಹಕನಿಗೆ ಸೇರಿದ ಸ್ವತ್ತುಗಳ ಮೇಲೆ ಈ ಮುಂದಿನ ಸಂದರ್ಭಗಳಲ್ಲಿ ಧರಣಾಧಿಕಾರ ಇರುವುದಿಲ್ಲ.

(i) ಭದ್ರ ಸುಫರ್ದಿನಲ್ಲಿರುವ ಅಮೂಲ್ಯ ವಸ್ತುಗಳು ;

(ii) ಗ್ರಾಹಕ ಬ್ಯಾಂಕಿಗೆ ಒಂದು ನಿರ್ದಿಷ್ಟ ಸೂಚನೆ ಕೊಟ್ಟು ಅಥವಾ ನಿರ್ದಿಷ್ಟ ಉದ್ದೇಶದಿಂದ ಹಣ ಕೇವಣಿ ಮಾಡಿದ್ದಾಗ (ಉದಾ: ಬ್ಯಾಂಕು ಡ್ರಾಫ್ಟನ್ನು ಕೊಳ್ಳಲು ಅಥವಾ ಪ್ರವಾಸಿ ಚೆಕ್ಕುಗಳನ್ನು ಕೊಳ್ಳಲು)

(iii) ನ್ಯಾಸದ ಖಾತೆಯ ಮೇಲೆ ಬ್ಯಾಂಕರ್ ತನ್ನ ಧರಣಾಧಿ ಕಾರ ಚಲಾಯಿಸುವಂತಿಲ್ಲ. ಅದೇ ರೀತಿ ಒಬ್ಬ ವ್ಯಕ್ತಿ ತನ್ನ ವೈಯಕ್ತಿಕ ಖಾತೆ ಹಾಗೂ ತಾನು ಅಭಿಕರ್ತನಾಗಿರುವ ಸಂಸ್ಥೆಯ ಖಾತೆ—ಇವೆರಡರಲ್ಲೂ ವ್ಯವಹರಿಸುತ್ತಿದ್ದರೆ, ಆ ಸಂದರ್ಭದಲ್ಲಿ ಅವನಿಂದ ಬರಬೇಕಾದ ಹಣಕ್ಕೆ, ಸಂಸ್ಥೆಯ ಖಾತೆಯ ಮೇಲೆ ಬ್ಯಾಂಕರ್ ಧರಣಾಧಿಕಾರ ಹೊಂದಿರುವುದಿಲ್ಲ.

## ಗ್ರಾಹಕನ ಖಾತೆಯ ಗೋಪ್ಯತೆ

ಬ್ಯಾಂಕರನ ಪುಸ್ತಕದಲ್ಲಿರುವ ಗ್ರಾಹಕನ ಖಾತೆ ಅವನ ಎಲ್ಲ ಬ್ಯಾಂಕಿಂಗ್ ವ್ಯವಹಾರಗಳ ದಾಖಲೆಯಾಗಿರುವುದರಿಂದ ಅದು ಅವನ ಹಣಕಾಸು ಸ್ಥಿತಿಯನ್ನು ತಿಳಿಸುತ್ತದೆ. ಈ ವಿವರಗಳು ಬೇರೆ ಯವರಿಗೆ ತಿಳಿಯುವುದರಿಂದ ಕೆಲವೊಮ್ಮೆ ಗ್ರಾಹಕನ ಮರ್ಯಾದೆಗೆ ಭಂಗ ಬರಬಹುದು. ಅಥವಾ ಅವನ ಹಿತಕ್ಕೆ ಧಕ್ಕೆ ಉಂಟಾಗ ಬಹುದು. ಆದ್ದರಿಂದ ಬ್ಯಾಂಕರ್ ತನ್ನ ಗ್ರಾಹಕನ ಖಾತೆಯ ಶಿಲ್ಕು, ಜಮಾ ಆದ ಮೊಬಲಗು, ಪಾವತಿಗೆ ಬರುವ ಚೆಕ್ಕುಗಳು, ವಸೂಲಿಗೆ ಬರುವ ಸಂಲೇಖಗಳು, ಮುಂತಾದ ವಿವರಗಳನ್ನು ಬೇರೆಯವರಿಗೆ ತಿಳಿಸಬಾರದು. ಅಂದರೆ ಖಾತೆಯ ವಿವರಗಳು ಗೋಪ್ಯವಾಗಿರ ಬೇಕು. ಈ ರಹಸ್ಯ ಪಾಲನೆ ಬ್ಯಾಂಕರನ ಮೇಲೆ ವಿಧಿಸಿರುವ ಹೊಣೆಯಾಗಿದೆ. ಆದರೆ ಇದಕ್ಕೆ ಕೆಲವು ವಿನಾಯಿತಿಗಳುಂಟು. ಮುಂದೆ ತಿಳಿಸಿರುವ ಸಂದರ್ಭಗಳಲ್ಲಿ ಬ್ಯಾಂಕರ್ ಗ್ರಾಹಕನ ಖಾತೆಯ ವಿವರಗಳನ್ನು ಬಹಿರಂಗಪಡಿಸಬಹುದು :

(ಅ) ಕೆಲವೊಂದು ಅಧಿನಿಯಮಗಳ ಪ್ರಕಾರ: ಉದಾ: 1961ರ ವರಮಾನ ತೆರಿಗೆ ಅಧಿನಿಯಮ ; 1956ರ ಕಂಪನಿಗಳ ಅಧಿನಿಯಮ ; 1934ರ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ ; ವರಮಾನ ತೆರಿಗೆ ಇಲಾಖೆ, ಪೋಲಿಸ್ ಇಲಾಖೆ ಇತ್ಯಾದಿಗಳಿಗೆ ;

(ಆ) ತುರ್ತುಪರಿಸ್ಥಿತಿಯಲ್ಲಿ : ಉದಾ: ಗ್ರಾಹಕನೊಬ್ಬ ವೈರಿ ದೇಶಗಳೊಡನೆ ವ್ಯಾಪಾರ ನಡೆಸಿ ಆ ಹಣವನ್ನು ಬ್ಯಾಂಕಿಗೆ ಜಮಾ ಮಾಡುತ್ತಿರುವಾಗ ;

(ಇ) ಗ್ರಾಹಕ ತನ್ನ ಕೀರ್ತಿ, ಗಣ್ಯತೆ, ಸುನಾಮ ಇವುಗಳ ಬಗ್ಗೆ ವಿಚಾರಿಸಿಕೊಳ್ಳಲು ಬ್ಯಾಂಕರನ ಹೆಸರನ್ನು ಪರಾಮರ್ಶೆಗೆ ನೀಡಿದ್ದಾಗ ;

(ಈ) ಸ್ವಂತ ಹಿತರಕ್ಷಣೆಗಾಗಿ ಬ್ಯಾಂಕರ್ ತನ್ನ ಗ್ರಾಹಕನ ಖಾತೆಯ ವಿವರಗಳನ್ನು ಬಹಿರಂಗಪಡಿಸಬಹುದು. ಗ್ರಾಹಕ ಪಡೆದ ಸಾಲಕ್ಕೆ ಬೇರೊಬ್ಬ ಹೊಣೆಯಾಗಿದ್ದಲ್ಲಿ, ಆ ಹೊಣೆಗಾರ ವಿವರಗಳನ್ನು ಅಪೇಕ್ಷಿಸಿದಾಗ ; ಗ್ರಾಹಕನ ಮೇಲೆ ನ್ಯಾಯಾಲಯದಲ್ಲಿ ಮೊಕದ್ದಮೆ ಇರುವಾಗ 1897ರ ಬ್ಯಾಂಕರನ ಪುಸ್ತಕಗಳ ಸಾಕ್ಷ್ಯ ಅಧಿನಿಯಮದ ಪ್ರಕಾರ ತನ್ನ ಲೆಕ್ಕಪುಸ್ತಕಗಳ ಬಿಂಬಪ್ರತಿಗಳನ್ನು ಅಥವಾ

ಪ್ರಮಾಣಿತ ನಿಜಪ್ರತಿಗಳನ್ನು ಬ್ಯಾಂಕರ್ ನ್ಯಾಯಾಲಯ ದಲ್ಲಿ ತೋರಿಸಬೇಕಾಗುತ್ತದೆ.

(ಉ) ಒಂದು ಬ್ಯಾಂಕಿನ ಗ್ರಾಹಕನೊಬ್ಬನ ಕೀರ್ತಿ, ನಂಬಿಕೆ, ವಿಶ್ವಾಸ, ವ್ಯಾಪಾರಿಯೋಗ್ಯತೆ ಇವುಗಳ ಬಗ್ಗೆ ಮತ್ತೊಂದು ಬ್ಯಾಂಕು ವಿಚಾರಿಸಿದಾಗ.

ಸಂದರ್ಭ ಯಾವುದೇ ಇರಲಿ, ಬ್ಯಾಂಕರ್ ಅತಿ ಜಾಗರೂಕತೆ ಯಿಂದ ಸತ್ಯ ವಿಷಯವನ್ನು ಮಾತ್ರ, ಅದೂ ಎಷ್ಟು ಬೇಕೊ ಅಷ್ಟು ಮಾತ್ರ, ತಿಳಿಸಬೇಕು. ಅವನು ನೀಡುವ ವಿವರಣೆಯಲ್ಲಿ ಅಸತ್ಯ, ಉತ್ಪ್ರೇಕ್ಷೆ, ಪೂರ್ವಾಗ್ರಹಗಳು ಇರಬಾರದು.

## ಅಲಾಭದಾಯಕ ಖಾತೆಗಳ ಮೇಲಣ ಖರ್ಚು

ತಮ್ಮ ಕೆಲವು ಗ್ರಾಹಕರ ಅಲಾಭದಾಯಕ ಖಾತೆಗಳ ಮೇಲೆ ತಮಗಾಗುವ ಪ್ರಾಸಂಗಿಕ ವೆಚ್ಚಗಳನ್ನು ಆ ಗ್ರಾಹಕರ ಖಾತೆಗೆ ಖುಣಿಸುವ ಕ್ರಮ ಇಂಗ್ಲೆಂಡಿನ ಬ್ಯಾಂಕುಗಳಲ್ಲಿದೆ. ಭಾರತೀಯ ಬ್ಯಾಂಕುಗಳು ಸಾಧಾರಣವಾಗಿ ವಾರ್ಷಿಕವಾಗಿ ಒಂದು ಅಲ್ಪ ಮೊಬಲಗನ್ನು ಇಂಥ ಖರ್ಚುಗಳಿಗಾಗಿ ತಮ್ಮ ಗ್ರಾಹಕರ ಖಾತೆಗೆ ಖುಣಿಸುತ್ತವೆ.

## ಸಾಲಗಳ ಮೇಲೆ ಚಕ್ರಬಡ್ಡಿ

ಸಾಲ ಪಡೆದ ಗ್ರಾಹಕರು ನಿಯತಕಾಲಿಕವಾಗಿ ಕೊಡಬೇಕಾದ ಬಡ್ಡಿಯನ್ನು ಪಾವತಿ ಮಾಡದಿದ್ದಲ್ಲಿ ಹಾಗೆ ಬಾಕಿಯಾದ ಬಡ್ಡಿ ಯನ್ನು ಸಾಲವೆಂದು ಪರಿಗಣಿಸಿ ಅದರ ಮೇಲೆ ಕೂಡ ಬಡ್ಡಿ ವಿಧಿ ಸುವ (ಚಕ್ರಬಡ್ಡಿ ಹಾಕುವ) ಹಕ್ಕು ಬ್ಯಾಂಕರನಿಗೆ ಇದೆ.

## ಕಾಲಾವಧಿ ಅಧಿನಿಯಮ

ಗ್ರಾಹಕ ತನ್ನ ಖಾತೆಯಿಂದ ವಾಪಸ್ಸು ಕೊಡಬೇಕಾದ ಹಣಕ್ಕೆ ಬ್ಯಾಂಕರ್ ಅನೇಕ ವರ್ಷಗಳ ಕಾಲ ಹಣ ತೆಗೆಯದಿದ್ದರೂ, ಅದಕ್ಕೆ ಜಮಾ ಮಾಡದಿದ್ದರೂ, ಬಡ್ಡಿ ಪಡೆಯದಿದ್ದರೂ ಬ್ಯಾಂಕರ್ ಖುಣದ ಬಗ್ಗೆ ತನ್ನ ಒಪ್ಪಿಗೆ ನೀಡದಿದ್ದರೂ ಆ ಖುಣ ಕಾಲಾತಿಕ್ರಾಂತವೆನಿಸು ವುದಿಲ್ಲ. ಆದರೆ ಸಾವಧಿ ಠೇವಣಿಯ ವಿಚಾರದಲ್ಲಿ ಭಿನ್ನಾಭಿಪ್ರಾಯ ವಿದೆ. ಗ್ರಾಹಕ ಹಣವನ್ನು ಹಿಂಪಡೆಯಲು ಸೂಚನೆ ನೀಡಿದ್ದರೆ ಅಥವಾ ಬೇಡಿಕೆ ಸಲ್ಲಿಸಿದ್ದರೆ ಆ ದಿನಾಂಕದಿಂದ ಅವಧಿಯ ಕಾಲ ಆರಂಭವಾಗುತ್ತದೆಯೆನ್ನಲಾಗಿದೆ.

## ಗಾರ್ನಿಷಿ ಆದೇಶ

ಬ್ಯಾಂಕಿನ ಗ್ರಾಹಕನೊಬ್ಬ ಬೇರೊಬ್ಬನಿಗೆ ಖುಣಿಯಾಗಿದ್ದಲ್ಲಿ, ಆ ಬ್ಯಾಂಕಿಗೆ ಆದೇಶ ನೀಡಿ ಅದು ತನ್ನ ಗ್ರಾಹಕನ (ಅಂದರೆ ಖುಣಿಯ) ಚೆಕ್ಕುಗಳನ್ನು ಪಾವತಿ ಮಾಡದಿರುವಂತೆ ನ್ಯಾಯಾಲಯ ಆಜ್ಞೆ ನೀಡಬೇಕೆಂದು ಧನಿ ಪ್ರಾರ್ಥಿಸಿಕೊಳ್ಳಬಹುದು. ಇದರ ಪ್ರಕಾರ ನ್ಯಾಯಾಲಯ ನೀಡುವ ಆದೇಶ ಗಾರ್ನಿಷಿ ಆದೇಶ ಎಂದು ಹೆಸರು. ಒಂದು ಬ್ಯಾಂಕಿನ ನಿರ್ದಿಷ್ಟ ಶಾಖೆಯ ಮೇಲೆ ಅಥವಾ ಬ್ಯಾಂಕಿನ ಮುಖ್ಯ ಕಛೇರಿಯ ಮೇಲೆ ನ್ಯಾಯಾಲಯ ಈ ಆದೇಶ ನೀಡ ಬಹುದು. ಮುಖ್ಯ ಕಛೇರಿಯ ಮೇಲೆ ನೀಡಿದ ಆದೇಶವನ್ನು ಅದು ಸಂಬಂಧಪಟ್ಟ ಶಾಖೆಗೆ ವರ್ಗಾಯಿಸುತ್ತದೆ. ಬ್ಯಾಂಕಿನ ಗ್ರಾಹಕನಿಂದ ಅವನ ಧನಿಗೆ ಈಗಾಗಲೇ ಬಾಕಿ ಇರುವ ಸಾಲದ ಮೊಬಲಗಿಗೆ ಮಾತ್ರ ಈ ಆದೇಶ ಅನ್ವಯವಾಗುತ್ತದೆ. ಗಾರ್ನಿಷಿ ಆದೇಶಕ್ಕೆ ಒಳಗಾಗಿರುವ ಗ್ರಾಹಕನ ಖಾತೆಯ ಮೇಲೆ ಯಾವುದೇ ವಹಿವಾಟನ್ನು ನಡೆಸದಿರುವುದು ಬ್ಯಾಂಕರ್ ಅನುಸರಿಸಬೇಕಾದ ಕ್ರಮ. ಅಲ್ಲದೆ ಈ ಆದೇಶ ಬಂದಕೂಡಲೇ ಗ್ರಾಹಕನಿಗೆ ಆ ಬಗ್ಗೆ ಬ್ಯಾಂಕರ್ ತಿಳಿಸ ಬೇಕು. ಗಾರ್ನಿಷಿ ಆದೇಶ ಗ್ರಾಹಕನ ಖಾತೆಯ ಸಂಪೂರ್ಣ ಶಿಲ್ಕಿಗೆ ಅನ್ವಯವಾಗದಿದ್ದರೆ, ಆದೇಶದ ಮೊಬಲಗಿಗೆ ಹೊರತಾದ ಶಿಲ್ಕಿಗೆ ಬೇರೆ ಖಾತೆ ತೆರೆಯುವಂತೆ ಗ್ರಾಹಕನಿಗೆ ತಿಳಿಸಬೇಕು.

## ಬ್ಯಾಂಕಿನ ವಿಶೇಷ ಗ್ರಾಹಕರು

ಕಾನೂನಿನ ದೃಷ್ಟಿಯಲ್ಲಿ ಯಾವ ವಿಧವಾದ ಅನರ್ಹತೆ ಇಲ್ಲದಿರುವ ವ್ಯಕ್ತಿ ಅಥವಾ ಸಂಸ್ಥೆಗಳು ಚಾಲ್ತಿ ಠೇವಣಿ ಖಾತೆಯನ್ನು ತೆರೆದು ಒಂದು ಬ್ಯಾಂಕಿನ ಗ್ರಾಹಕರಾಗಬಹುದು. ಕೆಲವು ವ್ಯಕ್ತಿ ಹಾಗೂ ಸಂಸ್ಥೆಗಳ ಕಾನೂನುಬದ್ಧ ಪರಿಸ್ಥಿತಿ ಹಲವು ವಿಲಕ್ಷಣಗಳಿಂದ ಕೂಡಿರುತ್ತದೆ. ಅಂಥವರು ಬ್ಯಾಂಕಿನ ವಿಶೇಷ ಗ್ರಾಹಕರು. ಇವರನ್ನು ವ್ಯಕ್ತಿಗತ ಮತ್ತು ಸಾಂಸ್ಥಿಕ ಗ್ರಾಹಕರು ಎಂಬ ಎರಡು ಶೀರ್ಷಿಕೆ ಗಳಲ್ಲಿ ವಿಭಾಗಿಸಿ ಹೇಳಬಹುದು. ವ್ಯಕ್ತಿರೂಪಿ ಗ್ರಾಹಕರಲ್ಲಿ ಪ್ರಮುಖ ರಾದವರು, ಅಪ್ರಾಪ್ತವಯಸ್ಕರು, ಮತಿವಿಕಲರು, ಕುಡುಕರು, ವಿವಾಹಿತ ಸ್ತ್ರೀಯರು, ಜಂಟಿ ಖಾತೆದಾರರು, ದಿವಾಳಿಗಳು, ನ್ಯಾಸಾಧಿಕಾರಿ ಮತ್ತು ನಿಷ್ಪಾದಕ ಇವರು.

## ಅಪ್ರಾಪ್ತ ವಯಸ್ಕ

ಭಾರತೀಯ ವಯಸ್ಕರ ಅಧಿನಿಯಮದ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯೂ ಅವನಿಗೆ ಹದಿನೆಂಟು ವರ್ಷ ತುಂಬುವವರೆಗೆ ಅಪ್ರಾಪ್ತ ವಯಸ್ಕ ಎಂದು ಪರಿಗಣಿಸಲ್ಪಡುತ್ತಾನೆ. ಆದರೆ ಆ ವ್ಯಕ್ತಿಗೆ ಹದಿನೆಂಟು ವರ್ಷ ತುಂಬುವುದರೊಳಗಾಗಿ ಅವನಿಗೆ ಹಾಗೂ ಅವನ ಆಸ್ತಿಗೆ ಪೋಷಕನೊಬ್ಬನೇಮಕಗೊಂಡಿದ್ದರೆ ಅಪ್ರಾಪ್ತವಯಸ್ಕತೆಯ ಅವಧಿ ಇನ್ನೂ ಮೂರು ವರ್ಷಗಳು ಮುಂದುವರಿದು, ಆತ ತನ್ನ ಇಪ್ಪತ್ತೊಂದು ವರ್ಷ ವಯಸ್ಸಿನ ಅನಂತರ ಪ್ರಾಪ್ತವಯಸ್ಕ ಎನಿಸಿ ಕೊಳ್ಳುತ್ತಾನೆ.

ಅಪ್ರಾಪ್ತವಯಸ್ಕನೊಬ್ಬ ತನ್ನ ಹೆಸರಿನಲ್ಲಿ ಚಾಲ್ತಿ ಖಾತೆ ತೆರೆಯಲು ಯಾವ ಆಕ್ಷೇಪಣೆಯೂ ಇಲ್ಲ. ಆದರೆ ಅವನು ಠೇವಣಿ ಶಿಲ್ಕು ಮೀರಿ ಚೆಕ್ಕು ಬರೆಯದಂತೆ ಎಚ್ಚರವಹಿಸಬೇಕು. ಕಾನೂನು ಪ್ರಕಾರ, ಅಪ್ರಾಪ್ತವಯಸ್ಕನೊಬ್ಬ ತಾನು ಪಡೆದ ಸಾಲವನ್ನು ತೀರಿಸಲು ಸಾಧ್ಯವಿಲ್ಲವೆಂದು ಹೇಳಬಹುದು. ಹೀಗೆ ಕಾನೂನು ರಕ್ಷಣೆ ಪಡೆದಿರುವ ಅವನಿಗೆ ಬ್ಯಾಂಕು ಸಾಲ ಕೊಡಬಾರದು. ಆತ ನೀಡಿದ ಹುಂಡಿ, ವಚನಪತ್ರ, ಚೆಕ್ಕು, ಆಧಾರಪತ್ರ, ಸಾಕ್ಷ್ಯ, ಜಾಮೀನು ಮುಂತಾದವುಗಳಿಗೆ ಮನ್ನಣೆ ಇರುವುದಿಲ್ಲ. ಅವನೊಡನೆ ಮಾಡಿಕೊಂಡ ಒಪ್ಪಂದ ಊರ್ಜಿತವಾಗದು. ಈ ಕಾರಣಗಳಿಂದಾಗಿ ಬ್ಯಾಂಕರ್ ಅಪ್ರಾಪ್ತವಯಸ್ಕನ ಪೋಷಕನ ಹೆಸರಿನಲ್ಲಿ ಖಾತೆ ತೆರೆ ಯುವುದು ಕ್ಷೇಮ. ಹೀಗೆ ಮಾಡಿದ್ದರೆ, ಅಕಸ್ಮಾತ್ ಅಜಾಗರೂಕತೆ ಯಿಂದ ಸಾಲಕೊಟ್ಟರೂ ಬ್ಯಾಂಕರ್ ಮರಳಿ ಪಡೆಯಬಹುದು. ಅಪ್ರಾಪ್ತವಯಸ್ಕನೊಬ್ಬ ಪ್ರಾಪ್ತವಯಸ್ಕನೊಬ್ಬನ ಅಭಿಕರ್ತನಾಗಿ ಚೆಕ್ಕು, ಹುಂಡಿಗಳನ್ನು ಕೊಡುವ ಮತ್ತು ಪರಕ್ರಾಮ್ಯ ಮಾಡುವ ಕಾರ್ಯ ನಿರ್ವಹಿಸಬಹುದು ಅಥವಾ ಒಪ್ಪಂದ ಮಾಡಿಕೊಳ್ಳ ಬಹುದು. ಈ ರೀತಿ ಮಾಡುವುದಕ್ಕೆ ಪ್ರಾಪ್ತವಯಸ್ಕ ಅಪ್ರಾಪ್ತ ವಯಸ್ಕನಿಗೆ ಲಿಖಿತರೂಪದಲ್ಲಿ ಅನುಮತಿ ನೀಡಿರಬೇಕು. ಇಂಥ

ದಸ್ತಾವೇಜುಗಳು ಅಥವಾ ಒಪ್ಪಂದಗಳು ಪ್ರಾಪ್ತವಯಸ್ಕ ನೀಡಿದಷ್ಟೇ ಕಾನೂನುಬದ್ಧವಾಗಿರುತ್ತವೆ. ಉದಾ : ತಂದೆ ತನ್ನ ಅಭಿಕರ್ತನಾಗಿ ತನ್ನ ಅಪ್ರಾಪ್ತವಯಸ್ಕ ಮಗನನ್ನು ನೇಮಿಸಬಹುದು. ಈ ಸಂದರ್ಭದಲ್ಲಿ ಮಗನಿಗೆ ತಂದೆಯಿಂದ ಅಧಿಕಾರ ದತ್ತವಾಗಿದೆಯೇ ಎಂಬುದನ್ನು ಬ್ಯಾಂಕರ್ ತಿಳಿದಿರಬೇಕು.

### ಮತಿವಿಕಲ

ಬುದ್ಧಿಭ್ರಮಣೆಯಾದ ವ್ಯಕ್ತಿಗಳು 1972ರ ಭಾರತೀಯ ಕರಾರುಗಳ ಅಧಿನಿಯಮದ ಪ್ರಕಾರ ಯಾವ ಕರಾರು ಮಾಡಿಕೊಳ್ಳಲೂ ಅರ್ಹರಲ್ಲ. ಆದರೆ ಬುದ್ಧಿ ಸರಿಯಿದ್ದ ಕಾಲದಲ್ಲಿ ಅವರು ಮಾಡಿಕೊಂಡ ಒಪ್ಪಂದಗಳು ಊರ್ಜಿತವಾಗುತ್ತವೆ. ಮತಿವಿಕಲರೊಡನೆ ಮಾಡಿಕೊಂಡ ಒಪ್ಪಂದ ಊರ್ಜಿತವಾಗಲಾರದು ಎಂಬುದನ್ನು ನೆನಪಿನಲ್ಲಿಟ್ಟುಕೊಂಡು, ಅಂಥವರ ಹೆಸರಿನಲ್ಲಿ ಬ್ಯಾಂಕು ಖಾತೆ ತೆರೆಯಲು ಒಪ್ಪಬಾರದು ಅಥವಾ ಸಾಲ ಕೊಡಬಾರದು. ಆದರೆ ಒಬ್ಬ ವ್ಯಕ್ತಿ ಸ್ವಸ್ಥಮನಸ್ಸಿನವನಾಗಿರುವಾಗ ಅವನ ಜೊತೆ ಮಾಡಿಕೊಂಡ ಒಪ್ಪಂದಗಳು ಊರ್ಜಿತವಾಗುತ್ತವೆ.

ತನ್ನ ಗ್ರಾಹಕನೊಬ್ಬನಿಗೆ ಮತಿವಿಕಲತೆ ಉಂಟಾಗಿದೆ ಎಂಬುದನ್ನರಿಯದೆ ಅವನು ಬರೆದ ಚೆಕ್ಕುಗಳನ್ನು ಬ್ಯಾಂಕರ್ ಸದ್ಭಾವದಿಂದ ಮತ್ತು ನಿರುಪೇಕ್ಷೆಯಿಂದ ಆಧರಿಸಿದ ಸಂದರ್ಭಗಳಲ್ಲಿ ಗ್ರಾಹಕನ ಖಾತೆಗೆ ಚೆಕ್ಕಿನ ಮೊಬಲಗನ್ನು ಖುಣಿಸಬಹುದು. ಆದರೆ ಗ್ರಾಹಕನ ಮತಿವಿಕಲತೆಯ ಅರಿವು ಬ್ಯಾಂಕರನಿಗಿರುವಾಗ ಚೆಕ್ಕುಗಳನ್ನು ಆದರಿಸಿದರೆ ಬ್ಯಾಂಕರನೇ ಜವಾಬ್ದಾರನಾಗುತ್ತಾನೆ. ಆದ್ದರಿಂದ ತನ್ನ ಗ್ರಾಹಕನ ಬುದ್ಧಿಭ್ರಮಣೆಯ ಬಗ್ಗೆ ನಂಬಲರ್ಹವಾದ ಸೂಚನೆ ಬಂದಕೂಡಲೇ ಆ ಗ್ರಾಹಕನ ಖಾತೆಯ ಮೇಲೆ ಎಲ್ಲ ವ್ಯವಹಾರಗಳನ್ನೂ ರದ್ದುಗೊಳಿಸಬೇಕು. ಗ್ರಾಹಕನ ಬುದ್ಧಿಸ್ವಾಧೀನತೆಯ ಬಗ್ಗೆ ಬ್ಯಾಂಕರನಿಗೆ ಸೂಚನೆ ಬಂದ ಅನಂತರ ಖಾತೆಯನ್ನು ಪುನಃ ತೆರೆಯಬಹುದು.

### ಕುಡುಕ

ಕಾನೂನಿನ ರೀತ್ಯ ಯಾವುದೇ ಕರಾರು ಊರ್ಜಿತವಾಗಬೇಕಾದರೆ, ಆ ಕರಾರಿಗೆ ಒಳಪಟ್ಟ ಕಕ್ಷಿಗಳ ಬುದ್ಧಿ ಸ್ಥಿಮಿತದಲ್ಲಿರಬೇಕು. ವಿಪರೀತ ಕುಡಿದ ಅಮಲಿನಲ್ಲಿರುವ ವ್ಯಕ್ತಿಗೆ ತಾನು ಮಾಡುತ್ತಿರುವ ಕಾರ್ಯದ ಅಥವಾ ಅದರ ಪರಿಣಾಮದ ಅರಿವು ಇರಲಾರದು. ಇಂಥ ಸಂದರ್ಭದಲ್ಲಿ ಅವನು ಬೇರೊಬ್ಬನ ಬಲಾತ್ಕಾರಕ್ಕೊಳಗಾಗಿ ಒಪ್ಪಂದಕ್ಕೆ ಅಥವಾ ಒಂದು ಚೆಕ್ಕಿಗೆ ತನ್ನ ಸಹಿ ಹಾಕಿರಬಹುದು. ಈ ಒಪ್ಪಂದದ ಪರಿಣಾಮವಾಗಿ ಉಂಟಾದ ನಷ್ಟದಿಂದ ಅವನು ವಿಮುಕ್ತನಾಗಬೇಕಾದರೆ, ಸಹಿ ಹಾಕುವಾಗ ತಾನು ಮದ್ಯದ ಅಮಲಿನಲ್ಲಿದ್ದನೆಂದೂ ಒಪ್ಪಂದದ ಪರಿಣಾಮಗಳ ಅರಿವುತನಗಿರಲಿಲ್ಲವೆಂದೂ ನ್ಯಾಯಾಲಯದಲ್ಲಿ ಸಾಧಿಸಬೇಕು. ಗ್ರಾಹಕನೊಬ್ಬ ಅಮಲಿನ ಸ್ಥಿತಿಯಲ್ಲಿ ತನ್ನ ಚೆಕ್ಕಿನ ಹಣ ಪಡೆಯಲು ಬ್ಯಾಂಕಿಗೆ ಹೋದಾಗ ಬ್ಯಾಂಕರ್ ಒಬ್ಬ ಸಾಕ್ಷಿಯ ಸಹಿ ಪಡೆದು ಹಣ ಪಾವತಿ ಮಾಡುವುದು ಕ್ಷೇಮ.

### ವಿವಾಹಿತ ಸ್ತ್ರೀ

ಭಾರತೀಯ ಸ್ತ್ರೀಯೊಬ್ಬಳು, ತಾನು ವಿವಾಹವಾದ ಕಾರಣದಿಂದಾಗಿ, ಒಪ್ಪಂದ ಮಾಡಿಕೊಳ್ಳುವ ಅರ್ಹತೆಯನ್ನು ಕಳೆದುಕೊಳ್ಳುವುದಿಲ್ಲ. ಆಕೆ ತನ್ನದೇ ಆದ ಆಸ್ತಿಯ (ಸ್ತ್ರೀಧನ) ಆಧಾರದ ಮೇಲೆ ಸಾಲ ಪಡೆಯಬಹುದು. 1956ರ ಹಿಂದೂ ಉತ್ತರಾಧಿಕಾರ ಅಧಿನಿಯಮದ ಪ್ರಕಾರ ವಿವಾಹಿತ ಸ್ತ್ರೀಗೆ ಆಕೆಯ ತಂದೆಯಿಂದ ಬಂದ ಆಸ್ತಿ ಅವಳ ಸಂಪೂರ್ಣ ಒಡೆತನದಲ್ಲಿ ಇರುತ್ತದೆ. ಇದರ ಮೇಲೆ ಗಂಡನ ಹಕ್ಕು ಇರುವುದಿಲ್ಲ. ಈ ಆಸ್ತಿಯನ್ನು ಆಧಾರವಾಗಿ ನೀಡಿ ಆಕೆ ಸಾಲ ಪಡೆಯಬಹುದು.

ವಿವಾಹಿತ ಸ್ತ್ರೀಯ ಹೆಸರಿನಲ್ಲಿ ಬ್ಯಾಂಕು ಚಾಲ್ತಿ ಖಾತೆ ತೆರೆಯಲು ಯಾವ ಅಡ್ಡಿಯೂ ಇಲ್ಲ. ಆದರೆ ಅವಳು ತನ್ನ ಖಾತೆಯ ಧನಿಕೆ ಶಿಲ್ಕಿನವರೆಗೆ ಮಾತ್ರ ಚೆಕ್ಕುಗಳನ್ನು ಬರೆಯುವಂತೆ ಬ್ಯಾಂಕರ್ ನೋಡಿಕೊಳ್ಳಬೇಕು. ಸ್ವಂತ ಆಸ್ತಿಯಿಲ್ಲದ ವಿವಾಹಿತ ಸ್ತ್ರೀಗೆ ಸಾಲ ಕೊಡಬಾರದು. ಆಕೆ ಬ್ಯಾಂಕಿನಿಂದ ಪಡೆದ ಸಾಲಕ್ಕೆ ಎರಡು ಸಂದರ್ಭಗಳಲ್ಲಿ ಮಾತ್ರ ಅವಳ ಪತಿ ಜವಾಬ್ದಾರನಾಗುತ್ತಾನೆ. ಮೊದಲನೆಯದಾಗಿ, ಆಕೆ ತನ್ನ ಪತಿಯ ಒಪ್ಪಿಗೆ ಪಡೆದು ಆತನ ಅಭಿಕರ್ತಳಾಗಿ ಸಾಲ ಪಡೆದಿರಬೇಕು; ಎರಡನೆಯದಾಗಿ, ಆಕೆ ತನ್ನ ಅಥವಾ ತನ್ನ ಕುಟುಂಬದ ಅವಶ್ಯಕತೆಗಾಗಿ ಸಾಲಪಡೆದಿರಬೇಕು. ತನ್ನ ಪತ್ನಿ ಮಾಡಿರುವ ಸಾಲಕ್ಕೆ ತನ್ನ ಅನುಮತಿ ಇರಲಿಲ್ಲ ಹಾಗೂ ಅವಳಿಗೆ ಮತ್ತು ಕುಟುಂಬಕ್ಕೆ ಅವಶ್ಯವಾದ ವಸ್ತುಗಳನ್ನು ತಾನು ಆಗಲೇ ಪೂರೈಸಿದ್ದೆನೆಂದು ಪತಿ ಸಾಧಿಸಿದರೆ, ಬ್ಯಾಂಕರ್ ತಾನು ಕೊಟ್ಟ ಸಾಲಕ್ಕೆ ಪತಿಯನ್ನು ಜವಾಬ್ದಾರನನ್ನಾಗಿ ಮಾಡುವಂತಿಲ್ಲ.

### ಜಂಟಿ ಖಾತೆದಾರರು

ಪಾಲುದಾರರಲ್ಲದ ಇಬ್ಬರು ಅಥವಾ ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳ ಹೆಸರಿನಲ್ಲಿ ತೆರೆದ ಖಾತೆಯೇ ಸಂಯುಕ್ತ ಖಾತೆ ಅಥವಾ ಜಂಟಿ ಖಾತೆ. ಇಂಥ ಖಾತೆ ತೆರೆಯಲಿಚ್ಛಿಸುವ ಎಲ್ಲ ವ್ಯಕ್ತಿಗಳೂ ಸಹಿಹಾಕಿದ ಅರ್ಜಿಯನ್ನು ಬ್ಯಾಂಕು ಪಡೆದಿರಬೇಕು. ಖಾತೆಯಲ್ಲಿ ವ್ಯವಹರಿಸುವ ವಿಷಯದಲ್ಲಿ ಅವರೆಲ್ಲರ ಸ್ಪಷ್ಟ ಸೂಚನೆಗಳನ್ನು ಲಿಖಿತ ರೂಪದಲ್ಲಿ ಪಡೆಯಬೇಕು. ಈ ಖಾತೆಯಲ್ಲಿ ವ್ಯವಹರಿಸುವವರ ಹೆಸರು, ಹುದ್ದೆ ಅಥವಾ ಉದ್ಯೋಗ, ವಿಳಾಸ, ಮಾದರಿ ಸಹಿಗಳು, ಅವರಿಗಿರುವ ಅಧಿಕಾರದ ವ್ಯಾಪ್ತಿ ಮೊದಲಾದ ಅಂಶಗಳು ಲಿಖಿತ ಸೂಚನೆಯಲ್ಲಿ ಸೇರಿರಬೇಕು. ಖಾತೆಯಲ್ಲಿ ವ್ಯವಹರಿಸಲು ಯಾರ ಹೆಸರೂ ಸೂಚಿತವಾಗದಿದ್ದಲ್ಲಿ ಚೆಕ್ಕುಗಳಿಗೆ ಎಲ್ಲರಿಂದಲೂ ಸಹಿ ಪಡೆಯಬೇಕು. ಜಂಟಿ ಖಾತೆದಾರರು ಮಿಾರೆಳೆತ ಪಡೆದಾಗ ಅವರ ವೈಯಕ್ತಿಕ ಮತ್ತು ಜಂಟಿ ಹೊಣೆಗಳ ಮೇಲೆ ಆ ಸೌಲಭ್ಯ ಕೊಡಬೇಕು. ಜಂಟಿ ಖಾತೆದಾರರಲ್ಲಿ ಯಾರಾದರೂ ಮರಣ ಹೊಂದಿದರೆ ಅಥವಾ ಮತಿವಿಕಲನಾದರೆ ಅಥವಾ ದಿವಾಳಿಯಾದರೆ, ಜಂಟಿ ಖಾತೆಯ ವ್ಯವಹಾರದ ಬಗ್ಗೆ ಕೊಟ್ಟಿದ್ದ ಸೂಚನಾಪತ್ರ ರದ್ದಾಗುತ್ತದೆ. ಮೃತನಾದ ಅಥವಾ ಮತಿವಿಕಲನಾದ ಅಥವಾ ದಿವಾಳಿಯಾದ ಜಂಟಿ ಖಾತೆದಾರನ ಹಕ್ಕುಬಾಧ್ಯತೆಗಳ ನಿರ್ಧಾರವಾಗುವವರೆಗೆ ಖಾತೆಯಲ್ಲಿ ಬ್ಯಾಂಕರ್ ವಹಿವಾಟು ನಡೆಸಕೂಡದು. ಭದ್ರ ಸುಫರ್ದಿನಲ್ಲಿ ಇಟ್ಟಿರುವ ವಸ್ತುಗಳನ್ನು ಮರಳಿ ಪಡೆಯಲು ಜಂಟಿ ಖಾತೆಯಲ್ಲಿ ವ್ಯವಹರಿಸುವವರಿಗೆ ಅಧಿಕಾರವಿದೆಯೇ ಎಂಬುದನ್ನು ಬ್ಯಾಂಕರ್ ತಿಳಿದಿರಬೇಕು. ಜಂಟಿ ಖಾತೆಗಳನ್ನು ತಂದೆ-ಮಕ್ಕಳು, ಗಂಡ-ಹೆಂಡತಿ ಇವರುಗಳು ತೆರೆಯಬಹುದು. ಗಂಡ-ಹೆಂಡತಿ ಜಂಟಿ ಖಾತೆದಾರರಾಗಿರುವಾಗ ಗಂಡ ಮೊದಲೇ ನಿಧನ ಹೊಂದಿದರೆ ಖಾತೆಯಲ್ಲಿನ ಶಿಲ್ಕು ಅವನ ವಾರಸುದಾರರಿಗೆ ಸೇರುತ್ತದೆ, ಹೆಂಡತಿಗಲ್ಲ. ಆದರೆ ಖಾತೆ ತೆರೆಯುವಾಗ 'ಇಬ್ಬರಲ್ಲೊಬ್ಬರು ; ಅಥವಾ ಬದುಕುಳಿದವರು' ಎಂಬ ನಿಯಮವನ್ನು ಬ್ಯಾಂಕರಿಗೆ ತಿಳಿಸಿದ್ದರೆ, ಆಗ ಪತಿಯ ಮರಣಾನಂತರ ಬ್ಯಾಂಕು ಖಾತೆಯ ಶಿಲ್ಕು ಪತ್ನಿಗೆ ಸೇರುತ್ತದೆ.

### ದಿವಾಳಿ

ಒಬ್ಬ ವ್ಯಕ್ತಿ ತಾನು ಕೊಡಬೇಕಾದ ಹಣವನ್ನು ಕೊಡಲು ಸಾಧ್ಯ ವಿಲ್ಲವೆಂದು ತನ್ನ ಧನಿಗಳಿಗೆ ಅಥವಾ ನ್ಯಾಯಾಲಯಕ್ಕೆ ಲಿಖಿತ ಸೂಚನೆ ಕೊಟ್ಟಾಗ ಅವನನ್ನು ದಿವಾಳಿ ಎಂದು ಕರೆಯಲಾಗುತ್ತದೆ. ಕಾನೂನು ರೀತ್ಯ ಇಂಥವನ ಆಸ್ತಿ ಸರ್ಕಾರಿ ಗೃಹೀತನ ವಶಕ್ಕೆ ಹೋಗುತ್ತದೆ. ಅಂದಮೇಲೆ ಅವನ ಬ್ಯಾಂಕು ಖಾತೆಯ ಶಿಲ್ಕು ಕೂಡ ಸರ್ಕಾರಿ ಗೃಹೀತನ ಅಧೀನಕ್ಕೆ ಒಳಪಡುತ್ತದೆ. ಈ ಸಂದರ್ಭದಲ್ಲಿ ಬ್ಯಾಂಕರ್ ದಿವಾಳಿಯಾದ ತನ್ನ ಗ್ರಾಹಕನ ಖಾತೆಯ ಮೇಲೆ ಎಲ್ಲ ವ್ಯವಹಾರಗಳನ್ನು ರದ್ದುಮಾಡಬೇಕು. ವಿಮುಕ್ತನಾಗದ ದಿವಾಳಿಯ ಬಗ್ಗೆ ಬ್ಯಾಂಕರ್ ವಿಶೇಷ ಜಾಗರೂಕತೆ ವಹಿಸಬೇಕು. ಅಂಥ ವ್ಯಕ್ತಿ ರೂ. 50ಕ್ಕೆ ಮೇಲ್ಪಟ್ಟು ಸಾಲ ಪಡೆಯುವಂತಿಲ್ಲ. ತನ್ನ ದಿವಾಳಿತನದ ವಿಷಯವನ್ನು ಬಚ್ಚಿಟ್ಟು ಬೇರೊಂದು ಹೆಸರನ್ನಿಟ್ಟುಕೊಂಡು ವ್ಯಾಪಾರ ವ್ಯವಹಾರಗಳನ್ನು ಅವನು ನಡೆಸುವುದನ್ನು ಕಾನೂನು ನಿಷೇಧಿಸುತ್ತದೆ. ಆದ್ದರಿಂದ ಬ್ಯಾಂಕರ್ ಅಂಥವರ ವಿಷಯದಲ್ಲಿ ಜಾಗರೂಕತೆಯಿಂದಿರಬೇಕು.

### ನ್ಯಾಸಧಾರಿ ಮತ್ತು ನಿಷ್ಪಾದಕ

ಒಬ್ಬ ವ್ಯಕ್ತಿಗೆ ಸೇರಿದ ಸ್ವತ್ತುಗಳನ್ನು ತನ್ನ ಅಧೀನದಲ್ಲಿಟ್ಟು ಕೊಂಡು ಅವುಗಳ ಮೇಲೆ ಬರುವ ಆದಾಯವನ್ನು ನ್ಯಾಸಪತ್ರ ಸೂಚಿಸುವ ಫಲಾನುಭವಿಗಳಿಗೆ ವಿನಿಯೋಗಿಸುವ ಕಾರ್ಯಕ್ಕೆ ನಿಯೋಜಿತನಾಗಿರುವವನನ್ನು ನ್ಯಾಸಧಾರಿ ಎಂದು ಹೇಳಬಹುದು. ನ್ಯಾಸಧಾರಿ ನ್ಯಾಸದ ಖಾತೆಯಿಂದ ತನ್ನ ಸ್ವಂತ ಖಾತೆಗೆ ಅನಧಿಕೃತ ವಾಗಿ ಹಣ ವರ್ಗಾಯಿಸದಂತೆ ಅಥವಾ ಇನ್ನಾವುದೇ ರೀತಿಯಲ್ಲಿ ಅದರ ಹಣವನ್ನು ದುರುಪಯೋಗ ಮಾಡದಂತೆ ಬ್ಯಾಂಕರ್ ಜಾಗರೂಕನಾಗಿರಬೇಕು. ನ್ಯಾಸಪತ್ರದ ವಿವರಗಳನ್ನು ಅವನು ಅರಿತಿರಬೇಕು. ಅದರ ಪ್ರತಿಯನ್ನು ತನ್ನಲ್ಲಿಟ್ಟುಕೊಳ್ಳುವುದು ಅಗತ್ಯ.

ಉಯಿಲು ಬರೆದ ವ್ಯಕ್ತಿ ಅದರಲ್ಲಿ ಸೂಚಿಸಿರುವಂತೆ, ಅವನ ಮರಣಾನಂತರ ಸ್ವತ್ತುಗಳ ವಿಲೇವಾರಿ ಮತ್ತು ಸಾಲಗಳ ಮರು ಪಾವತಿ ಕಾರ್ಯಗಳನ್ನು ನೋಡಿಕೊಳ್ಳಲು ನಿಯೋಜಿಸುವ ವ್ಯಕ್ತಿಗೆ ನಿಷ್ಪಾದಕ ಎಂದು ಹೆಸರು. ಅವನ ಹಕ್ಕುಬಾಧ್ಯತೆಗಳು ಉಯಿಲಿನಲ್ಲಿ ನಮೂದಿತವಾಗಿರುತ್ತವೆ. ತನ್ನ ನೇಮಕ ಪತ್ರವನ್ನು ನ್ಯಾಯಾಲಯ ದಿಂದ ತಂದಾಗ ಮಾತ್ರ ನಿಷ್ಪಾದಕನಿಗೆ ಮೃತಗ್ರಾಹಕನ ಬ್ಯಾಂಕು ಖಾತೆಯಲ್ಲಿ ವ್ಯವಹರಿಸಲು ಬಿಡಬೇಕು. ಅತಿ ಜರೂರಾದ ಪಾವತಿ ಗಳನ್ನು ಮಾಡಲು ನಿಷ್ಪಾದಕ ಮಿಾರೆಳೆತ ಕೇಳಿದಾಗ ಅವನ ವೈಯಕ್ತಿಕ ಹೊಣೆಯ ಮೇಲೆ ಮಾತ್ರ ಬ್ಯಾಂಕರ್ ಅವಕಾಶ ನೀಡ ಬೇಕು.

### ಬ್ಯಾಂಕಿನ ಸಾಂಸ್ಥಿಕ ಗ್ರಾಹಕರು : ಪಾಲುದಾರಿಕೆ ಸಂಸ್ಥೆ

ಇಬ್ಬರು ಅಥವಾ ಹೆಚ್ಚಿನ ಜನ ಕೂಡಿ ವ್ಯಾಪಾರ ನಡೆಸಿ ಅದರಲ್ಲಿ ಬರುವ ಲಾಭ (ಅಥವಾ ನಷ್ಟ)ವನ್ನು ಹಂಚಿಕೊಳ್ಳಲು ಮಾಡಿ ಕೊಳ್ಳುವ ಒಪ್ಪಂದಕ್ಕೆ ಪಾಲುದಾರಿಕೆ ಎಂದು ಹೆಸರು. ಪಾಲುದಾರಿಕೆ ಸಂಸ್ಥೆಯ ಹೆಸರಿನಲ್ಲಿ ಬ್ಯಾಂಕು ಖಾತೆತೆರೆಯಲು ಎಲ್ಲ ಪಾಲುದಾರರೂ ಸಹಿ ಮಾಡಿರುವ ಅರ್ಜಿ ಪತ್ರವನ್ನು ತೆಗೆದುಕೊಳ್ಳಬೇಕು. ಇದರಲ್ಲಿ ಸಂಸ್ಥೆಯ ಪಾಲುದಾರರ ಹೆಸರು, ವಿಳಾಸಗಳು, ನಡೆಸುವ ವ್ಯಾಪಾರ, ಬ್ಯಾಂಕು ಖಾತೆಯಲ್ಲಿ ವ್ಯವಹರಿಸಲು ಅಧಿಕಾರ ಪಡೆದ ಪಾಲುದಾರರ ಹೆಸರು, ವಿಳಾಸ, ಮಾದರಿ ಸಹಿಗಳು, ಅವರಿಗಿರುವ ಅಧಿಕಾರವ್ಯಾಪ್ತಿ ಇವೆಲ್ಲ ವಿವರಗಳು ಇರಬೇಕು. ಯಾವುದೇ ಪಾಲುದಾರನಿಗೆ ತನ ಸ್ವಂತ ಹೆಸರಿನಲ್ಲಿ ಸಂಸ್ಥೆಯ ಬ್ಯಾಂಕು ಖಾತೆ ತೆರೆಯಲು ಅಧಿಕಾರ ವಿಲ್ಲ. ಪಾಲುದಾರಿಕೆ ಒಪ್ಪಂದವನ್ನು ಬ್ಯಾಂಕರ್ ಪರೀಕ್ಷಿಸಿ ಅದರಲ್ಲಿ ಸಂಸ್ಥೆಯ ಬ್ಯಾಂಕು ಖಾತೆಯಲ್ಲಿ ಸಾಲ ಪಡೆಯುವ ಅಧಿಕಾರದ ಬಗ್ಗೆ ವಿಶೇಷ ಸೂಚನೆಗಳೇನಾದರೂ ಇವೆಯೇ ಎಂಬುದನ್ನು ತಿಳಿಯ ಬೇಕು. ಪಾಲುದಾರರಿಲ್ಲದೆ ಮೂರನೆಯ ವ್ಯಕ್ತಿಯೊಬ್ಬ (ಉದಾ ; ಸಂಸ್ಥೆಯ ವ್ಯವಸ್ಥಾಪಕ) ಬ್ಯಾಂಕು ಖಾತೆಯಲ್ಲಿ ವ್ಯವಹರಿಸುವು ದಾದರೆ ಅವನಿಗೆ ಅಧಿಕಾರ ನೀಡಲು ಎಲ್ಲ ಪಾಲುದಾರರೂ ಸಮ್ಮತಿಸ ಬೇಕು.

ಸಂಸ್ಥೆ ನೀಡಿರುವ ಚೆಕ್ಕಿನ ಪಾವತಿಯನ್ನು ತಡೆಹಿಡಿಯಲು ಪ್ರತಿಯೊಬ್ಬ ಪಾಲುದಾರನಿಗೂ ಅಧಿಕಾರವಿದೆ. ಅದೇ ರೀತಿ, ಒಬ್ಬ ಅಥವಾ ಹೆಚ್ಚಿನ ಪಾಲುದಾರರು ಬ್ಯಾಂಕಿಗೆ ಸೂಚನೆ ನೀಡಿ, ಸಂಸ್ಥೆಯ ಬ್ಯಾಂಕು ಖಾತೆಯಲ್ಲಿ ವ್ಯವಹರಿಸುವ ಪಾಲುದಾರನ ಅಧಿಕಾರವನ್ನು ರದ್ದುಗೊಳಿಸಬಹುದು. ಇಂತಹ ಸಂದರ್ಭಗಳಲ್ಲಿ ಬ್ಯಾಂಕರ್ ಆ ಸೂಚನೆಗೆ ಮನ್ನಣೆ ನೀಡಿ, ಪಾವತಿಗೆ ಬಂದ ಚೆಕ್ಕುಗಳನ್ನು ಅನಾದರಿಸ ಬೇಕು.

ಪ್ರತಿಯೊಬ್ಬ ಪಾಲುದಾರನಿಗೂ ಸಂಸ್ಥೆಯ ಪರವಾಗಿ ಪರಕ್ರಾಮ್ಯ ಸಂಲೇಖನಗಳನ್ನು ರಚಿಸುವ, ವರ್ಗಾಯಿಸುವ ಮತ್ತು ವಟಾವಣೆ ಮಾಡುವ ಹಕ್ಕಿದೆ. ಆದರೆ ಬ್ಯಾಂಕಿಗೆ ಕೊಟ್ಟಿರುವ ಸೂಚನೆ ಪತ್ರದಲ್ಲಿ ಹೆಸರಿಸಿದ ಪಾಲುದಾರನೊಬ್ಬ ಸಹಿಮಾಡಿದ ಚೆಕ್ಕು ಪಾವತಿಗೆ ಬಂದಾಗ ಬ್ಯಾಂಕು ಅದನ್ನು ನಿರಾಕರಿಸಬೇಕು. ಸಂಸ್ಥೆಯ ಹೆಸರಿನಲ್ಲಿ ಇರುವ ಚೆಕ್ಕನ್ನುಪಾಲದಾರನ ಸ್ವಂತ ಖಾತೆಗೆ ಜಮಾ ಮಾಡಕೂಡದು. ಸಂಸ್ಥೆ ಪಡೆಯುವ ಮಿಾರೆಳೆತ ಅಥವಾ ಇತರ ಸಾಲಗಳಿಗೆ ಎಲ್ಲ ಪಾಲುದಾರರೂ ಒಟ್ಟಾಗಿ ವೈಯಕ್ತಿಕವಾಗಿ ಜವಾಬ್ದಾರರಾಗುವಂತೆ ನೋಡಿಕೊಳ್ಳಬೇಕು.

ಸಂಸ್ಥೆಯ ಬ್ಯಾಂಕು ಖಾತೆಯಲ್ಲಿ ಧನಿ ಶಿಲ್ಕು ಇರುವಾಗ ಹೊಸ ಪಾಲುದಾರನೊಬ್ಬ ಸೇರಿದರೆ, ಅವನ ಹೆಸರನ್ನು ಸೇರಿಸಿದ ಹೊಸ ಸೂಚನಾಪತ್ರವನ್ನು ಪಡೆದು ಖಾತೆಯನ್ನು ಮುಂದುವರಿಸಬಹುದು. ಆದರೆ ಹೊಸ ಪಾಲುದಾರ ಬಂದಾಗ ಸಂಸ್ಥೆಯಲ್ಲಿ ಋಣಿಶಿಲ್ಕು ಇದ್ದರೆ ಆ ಖಾತೆಯನ್ನು ಮುಕ್ತಾಯಗೊಳಿಸಿ ಹೊಸ ಖಾತೆಯನ್ನು ತೆರೆಯ ಬೇಕು. ಪಾಲುದಾರನೊಬ್ಬ ನಿವೃತ್ತನಾದರೆ ಅವನು ಬ್ಯಾಂಕಿಗೆ ತನ್ನ ನಿವೃತ್ತಿ ಸೂಚನೆಯನ್ನು ಬ್ಯಾಂಕಿಗೆ ಕೊಡಬೇಕು. ಹೀಗೆ ಮಾಡ ದಿದ್ದರೆ, ಅವನು ನಿವೃತ್ತನಾದ ಸಂಸ್ಥೆಯ ಬ್ಯಾಂಕು ವ್ಯವಹಾರಗಳಿಗೆ ಅನಂತರವೂ ಜವಾಬ್ದಾರನಾಗುತ್ತಾನೆ. ಪಾಲುದಾರನೊಬ್ಬನ ದಿವಾಳಿ ತನ, ಮರಣದಿಂದಾಗಿ ಪಾಲುದಾರಿಕೆ ವಿಘಟಿತವಾಗುತ್ತದೆ. ಈ ಸಂದರ್ಭದಲ್ಲಿ ಬ್ಯಾಂಕು ಖಾತೆಯಲ್ಲಿ ಋಣಿ ಶಿಲ್ಕಿದ್ದರೆ ಅದನ್ನು ಮುಕ್ತಾಯಗೊಳಿಸಿ ದಿವಾಳಿಯಾದ/ಮೃತನಾದ ಪಾಲುದಾರನ ಜವಾಬ್ದಾರಿಯನ್ನು ನಿರ್ಧರಿಸಬೇಕು. ಸಂಸ್ಥೆಯ ರಚನೆಯಲ್ಲಿ ಏನೇ ಬದಲಾವಣೆಯಾದರೂ ಅದರ ಬಗ್ಗೆ ಬ್ಯಾಂಕು ಕೂಡಲೇ ಯುಕ್ತ ಸೂಚನೆ ಪಡೆದುಕೊಳ್ಳಬೇಕು.

### ಕೂಡುಬಂಡವಾಳ ಕಂಪನಿ

ಅಧಿಕ ಉತ್ಪಾದನೆಯ ಗುರಿಯುಳ್ಳ ಆಧುನಿಕ ಉತ್ಪಾದನ ಸಂಘಟನೆಯಲ್ಲಿ ಕೂಡು ಬಂಡವಾಳ ಸಂಸ್ಥೆಗಳು ಪ್ರಮುಖವಾದವು. ಕಂಪನಿಗಳ ಅಧಿನಿಯಮ 1956ರ ನಿಯಮಗಳಂತೆ ನಮ್ಮ ದೇಶ

ದಲ್ಲಿ ಕಂಪನಿಗಳು ಅಸ್ತಿತ್ವಕ್ಕೆ ಬರುತ್ತವೆ. ಬ್ಯಾಂಕರ್ ಕಂಪನಿಯ ಹೆಸರಿನಲ್ಲಿ ಚಾಲ್ತಿ ಖಾತೆ ತೆರೆಯಬಹುದು ಮತ್ತು ಅದಕ್ಕೆ ಅಗತ್ಯವಾದಾಗ ಸಾಲಗಳನ್ನು ಕೊಡಬಹುದು. ಕೂಡು ಬಂಡವಾಳ ಸಂಸ್ಥೆಯ ಹೆಸರಿನಲ್ಲಿ ವ್ಯವಹರಿಸುವಾಗ ಹಲವು ವಿಷಯಗಳಿಗೆ ಬ್ಯಾಂಕರ್ ಗಮನ ನೀಡಬೇಕು.

**1 ಮುಖ್ಯ ಪತ್ರಗಳ ಪರಿಶೀಲನೆ**

ಕಂಪನಿಯ ಸನ್ನದು ಅಥವಾ ನೋಂದಣಿ ಪತ್ರದ ಪ್ರತಿಗಳನ್ನು ಬ್ಯಾಂಕರ್ ಪರಿಶೀಲಿಸಬೇಕು. ಇದರ ಜೊತೆಗೆ ಕಂಪನಿಯ ಜ್ಞಾಪನ ಪತ್ರ ಮತ್ತು ಲಿಖಿತ ಕಟ್ಟಳೆಗಳನ್ನು ಪಡೆದಿಟ್ಟುಕೊಳ್ಳಬೇಕು. ಹೊಸದಾಗಿ ಪ್ರಾರಂಭವಾದ ಕಂಪನಿಯಾದರೆ ಅದರ ಜ್ಞಾಪನ ಪತ್ರದಲ್ಲಿ ಮೊದಲ ನಿರ್ದೇಶಕರುಗಳನ್ನು ಹೆಸರಿಸಲಾಗಿದೆಯೇ ಎಂಬುದನ್ನು ಪರಿಶೀಲಿಸಬೇಕು. ಅದರ ವ್ಯವಹಾರಾರಂಭ ಪ್ರಮಾಣಪತ್ರ ನೋಡುವುದು ಒಳ್ಳೆಯದು.

**2 ನಿರ್ದೇಶಕರ ಮಂಡಳಿ ನಿರ್ಣಯ**

ಕಂಪನಿ ಬ್ಯಾಂಕು ಖಾತೆ ತೆರೆಯಬೇಕಾದರೆ ಆ ಬಗ್ಗೆ ನಿರ್ದೇಶಕರ ಮಂಡಳಿಯ ಸಭೆಯಲ್ಲಿ ನಿರ್ಣಯವಾಗಬೇಕು. ಈ ನಿರ್ಣಯದ ಪ್ರತಿಯೊಂದನ್ನು ಬ್ಯಾಂಕು ಪಡೆದಿಟ್ಟುಕೊಳ್ಳಬೇಕು. ಈ ನಿರ್ಣಯದಲ್ಲಿ ಖಾತೆಯಲ್ಲಿ ವ್ಯವಹರಿಸುವವರ ಹೆಸರು, ಹುದ್ದೆ, ವಿಳಾಸ ಮತ್ತು ಮಾದರಿ ಸಹಿಗಳು ಇರಬೇಕು.

3 ಈಗಾಗಲೇ ಅಸ್ತಿತ್ವದಲ್ಲಿರುವ ಕಂಪನಿಯ ಹೆಸರಿನಲ್ಲಿ ಖಾತೆ ತೆರೆಯಬೇಕಾದರೆ ಅದರ ಲೆಕ್ಕ ಪರಿಶೋಧಕನಿಂದ ಸಮರ್ಥಿಸಲಾದ ಹಿಂದಿನ ಎರಡು ಮೂರು ವರ್ಷಗಳ ಲೇಣೆ–ದೇಣೆ ಪಟ್ಟಿಯನ್ನು ಪಡೆದು ಕಂಪನಿಯ ಹಣಕಾಸು ಪರಿಸ್ಥಿತಿಯನ್ನು ತಿಳಿಯುವುದು ಕ್ಷೇಮ.

4 ಕಂಪನಿಯ ಲಿಖಿತ ಕಟ್ಟಳೆಗಳಲ್ಲಿ ಸಾಲಪಡೆಯುವ ಬಗ್ಗೆ ವಿಶೇಷ ನಿಯಮಗಳಿರುತ್ತವೆ. ಇದನ್ನು ಬ್ಯಾಂಕರ್ ಪರಿಶೀಲಿಸಬೇಕು. ಸಾಲ ಮಂಜೂರು ಮಾಡುವ ಮೊದಲು, ಕಂಪನಿಯ ನಿರ್ದೇಶಕರ ಸಭೆಯಲ್ಲಿ ಸಾಲದ ಬಗ್ಗೆ ಆಗಿರುವ ನಿರ್ಣಯದ ಪ್ರತಿಯನ್ನು ಪಡೆದುಕೊಳ್ಳಬೇಕು. ಕಂಪನಿ ಸಾಲಪಡೆಯಲಿಚ್ಛಿಸುವ ಮೊಬಲಗು, ನೀಡುವ ಆಧಾರಗಳು, ಕಂಪನಿಯ ಪರವಾಗಿ ಈ ವ್ಯವಹಾರವನ್ನು ನಡೆಸಲು ನಿಯೋಜಿತರಾದ ಅಧಿಕಾರಿಗಳು ಅವರ ಅಧಿಕಾರವ್ಯಾಪ್ತಿ, ಇವೆಲ್ಲ ವಿವರಗಳು ಈ ನಿರ್ಣಯದಲ್ಲಿ ಇರಬೇಕು.

5 ಕಂಪನಿಯು ಅವಸಾಯನವಾದಾಗ ಅದರ ನಿರ್ದೇಶಕರ ಅಧಿಕಾರಗಳು ರದ್ದಾಗುತ್ತವೆ. ಕಂಪನಿಯ ಅವಸಾಯನದ ಸೂಚನೆ ಬ್ಯಾಂಕರನಿಗೆ ಬಂದಿದ್ದಲ್ಲಿ ಅವನು ಚೆಕ್ಕುಗಳನ್ನು ಪಾವತಿ ಮಾಡಬೇಕಾಗಿಲ್ಲ. ಅವಸಾಯಕನ ಸೂಚನೆಯಂತೆ ಬ್ಯಾಂಕರ್ ನಡೆದುಕೊಳ್ಳಬೇಕು.

6 ಖಾಸಗಿ ಕಂಪನಿಗಳಿಗೆ ಸಾಲ ನೀಡುವಲ್ಲಿ ಬ್ಯಾಂಕರ್ ಎಚ್ಚರ ವಹಿಸಬೇಕು. ಏಕವ್ಯಕ್ತಿ ವ್ಯಾಪಾರ ಸಂಸ್ಥೆಯೊಂದು ಖಾಸಗಿ ಕಂಪನಿಯಾಗಿ ಪರಿವರ್ತನೆಯಾಗಿರುವ ಸಂದರ್ಭಗಳುಂಟು.

7 ಕಂಪನಿಯ ಬ್ಯಾಂಕು ಖಾತೆಯಲ್ಲಿ ವ್ಯವಹರಿಸಲು ಅಧಿಕಾರ ಇರುವ ನಿರ್ದೇಶಕನ ಸ್ವಂತ ಖಾತೆ ಅದೇ ಬ್ಯಾಂಕಿನಲ್ಲಿದ್ದರೆ, ಕಂಪನಿಯ ಹೆಸರಿಗೆ ಬಂದಿರುವ ಚೆಕ್ಕು ಅಥವಾ ಇತರ ಸಂಲೇಖಗಳು ಸ್ವಂತ ಖಾತೆಗೆ ಹೋಗದಂತೆ ಎಚ್ಚರ ವಹಿಸಬೇಕು.

**ವ್ಯಾಪಾರೇತರ ಸಂಸ್ಥೆಗಳು**

ವ್ಯಾಪಾರ ಮಾಡುವ ಅಥವಾ ಲಾಭ ಗಳಿಸುವ ಉದ್ದೇಶಗಳಿಲ್ಲದ ಕಲೆ, ವಿಜ್ಞಾನ, ಕ್ರೀಡೆ, ಲಲಿತಕಲೆ ಮುಂತಾದ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ, ಸಂಘಗಳ ಅಧಿನಿಯಮದ ಅಥವಾ ಕಂಪನಿಗಳ ಅಧಿನಿಯಮದ ಪ್ರಕಾರ ನೋಂದಣಿಯಾಗುವ ಸಂಸ್ಥೆಗಳನ್ನು ವ್ಯಾಪಾರೇತರ ಸಂಸ್ಥೆಗಳು ಎಂದು ಕರೆಯಲಾಗುತ್ತದೆ. ಇಂಥ ಸಂಸ್ಥೆಗಳ ಹೆಸರಿನಲ್ಲಿ ಬ್ಯಾಂಕು ಖಾತೆ ತೆರೆಯುವಾಗ ಬ್ಯಾಂಕರ್ ಕೆಲವು ಕ್ರಮಗಳನ್ನು ಅನುಸರಿಸಬೇಕು.

ಸಂಸ್ಥೆ ನೋಂದಣಿಯಾಗಿದೆಯೇ ಎಂಬುದನ್ನು ಮೊದಲು ತಿಳಿಯಬೇಕು. ಸಂಸ್ಥೆಯ ಒಳನಿಬಂಧನೆಗಳ ಒಂದು ಪ್ರತಿಯನ್ನು ಪಡೆದುಕೊಂಡು, ಅದರ ಅಧಿಕಾರಿಗಳ ಕಾರ್ಯಭಾರ ಮತ್ತು ಅಧಿಕಾರವ್ಯಾಪ್ತಿಯನ್ನು ಅರಿಯಬೇಕು. ಬ್ಯಾಂಕು ಖಾತೆ ತೆರೆಯಲು ಆಡಳಿತ ಮಂಡಳಿ ನಿರ್ಣಯ ಮಾಡಬೇಕು. ಈ ನಿರ್ಣಯದ ಪ್ರತಿಯನ್ನು ಬ್ಯಾಂಕರ್ ಪಡೆದುಕೊಳ್ಳಬೇಕು. ಬ್ಯಾಂಕು ಖಾತೆಯಲ್ಲಿ ವ್ಯವಹರಿಸುವವರ ಹೆಸರು, ವಿಳಾಸ, ಹುದ್ದೆ, ಮಾದರಿ ಸಹಿಗಳನ್ನು ಪಡೆದುಕೊಳ್ಳಬೇಕು. ಸಂಸ್ಥೆಗೆ ಹೆಚ್ಚು ಆದಾಯಗಳಿಲ್ಲದಿರುವುದರಿಂದ ಬ್ಯಾಂಕು ಸಾಲ ಕೊಡಬಾರದು. ಸಂಸ್ಥೆಯ ಅಧಿಕಾರದಲ್ಲಿ ಬದಲಾವಣೆಯಾದರೆ ಆ ಬಗ್ಗೆ ಬ್ಯಾಂಕರನಿಗೆ ಕೂಡಲೇ ಸೂಚನೆ ಬರಬೇಕು. ಹೊಸ ಅಧಿಕಾರಿಯ ಸಹಿಗಳನ್ನು ಒದಗಿಸಿ ಅನಂತರ ಬ್ಯಾಂಕರ್, ಖಾತೆಯ ಮೇಲೆ ವ್ಯವಹಾರಗಳನ್ನು ಮುಂದುವರಿಸಲು ಅವಕಾಶ ನೀಡಬೇಕು.

ಬ್ಯಾಂಕರ್–ಗ್ರಾಹಕ ಸಂಬಂಧ ಕರಾರಿನಿಂದ ಅಸ್ತಿತ್ವಕ್ಕೆ ಬರುವಂಥದು. ಇಲ್ಲಿ ಕೂಡ ಮಾನವೀಯ ಮೌಲ್ಯಗಳು ಗಣನೆಗೆ ಬರುತ್ತವೆ. ಗ್ರಾಹಕನಿಲ್ಲದೆ ಬ್ಯಾಂಕರನಿಲ್ಲ. ಅಂತೆಯೇ ಬ್ಯಾಂಕರನಿಲ್ಲದೆ ಗ್ರಾಹಕರಿಲ್ಲ. ಪರಸ್ಪರ ಸದ್ಭಾವನೆ ಅಗತ್ಯ. ಬ್ಯಾಂಕಿನ ವ್ಯವಹಾರದಲ್ಲಿ ಅಗತ್ಯವಾಗಿ ಪಾಲಿಸಬೇಕಾದ ನಿಯಮಗಳು ಮೂರು—ನಂಬಿಕೆ, ಗೋಪ್ಯತೆ ಮತ್ತು ಸುಲಭ ಹಾಗೂ ಶೀಘ್ರ ಕಾರ್ಯನಿರ್ವಹಣೆ. ಅಂತೆಯೇ ಬ್ಯಾಂಕರ್ ಗ್ರಾಹಕನಿಂದ ನಿರೀಕ್ಷಿಸುವುದು ಸೌಜನ್ಯ, ಲಾಭ ಮತ್ತು ಹೊಗಳಿಕೆ. ಗ್ರಾಮೀಣ ಪ್ರದೇಶಗಳಿಗೆ ಬ್ಯಾಂಕು ಸೇವೆ ತೀವ್ರ ವಿಸ್ತರಣೆಯಾಗುತ್ತಿರುವ ಈಗ ಇಂತಹ ಪರಸ್ಪರ ಭಾವನೆಗಳ ಅರಿವು ಮೂಡಿದಾಗ ಸಂಬಂಧ ಹೆಚ್ಚು ಆತ್ಮೀಯವಾಗುತ್ತದೆ.



● ● ●

# ಕರ್ನಾಟಕದ ಭೂ ಅಭಿವೃದ್ಧಿ ಬ್ಯಾಂಕಿನ ಪ್ರಗತಿ

**ಸದಾನಂದ ಚ. ಕಡಲಿ**

**ಐತಿಹಾಸಿಕ ಹಿನ್ನೆಲೆ**

ವ್ಯವಸಾಯ ಅತಿ ಮುಖ್ಯವಾದ ಒಂದು ಕಸುಬಾಗಿದ್ದರೂ ಸಂಬಂಧ ಪಟ್ಟವರು ವ್ಯವಸಾಯದ ಕಡೆಗೆ ಹೆಚ್ಚಿನ ಗಮನ ಕೊಟ್ಟಿಲ್ಲವೆಂದು ಹೇಳಬಹುದು.

ಆರ್ಥಿಕ ಪ್ರಗತಿಯ ಸಾಧನೆಯ ಹಾದಿಯಲ್ಲಿರುವ ರಾಷ್ಟ್ರಗಳ ಬಹು ಪಾಲಿನ ಆದಾಯವನ್ನು ಕೃಷಿರಂಗ ಒದಗಿಸುವುದಲ್ಲದೆ, ಅವುಗಳ ಮೂರನೆಯ ಎರಡು ಭಾಗದಷ್ಟು ಜನಸಂಖ್ಯೆಯ ಜೀವನೋಪಾಯಕ್ಕೆ ಬೇಸಾಯವೇ ಆಧಾರ. ದೇಶದ ಬಹಳಷ್ಟು ಕೈಗಾರಿಕೋದ್ಯಮಗಳು ಕೃಷಿ ಮೂಲದ ಕಚ್ಚಾ ಸಾಮಗ್ರಿಯನ್ನು ಅವಲಂಬಿಸಿರುವುದಲ್ಲದೆ, ಕೃಷಿಗೆ ಪೂರಕವಾದ ಅನೇಕ ಸಾಮಗ್ರಿಗಳ ಉತ್ಪಾದನೆಯಲ್ಲಿ ತೊಡಗಿವೆ. ಆರ್ಥಿಕ ಉನ್ನತಿಯನ್ನು ಸಾಧಿಸುತ್ತಿರುವ ದೇಶಗಳಲ್ಲಿ ಕೃಷಿ ಪ್ರಗತಿ ಹೊಂದುವುದು ಅತ್ಯಂತ ತುರ್ತಾದುದು ಮತ್ತು ಪ್ರಮುಖವಾದುದು. ಕೃಷಿಯ ಪ್ರಗತಿಯಿಂದ ಬಹುಪಾಲು ಜನರ ಜೀವನ ಮಟ್ಟದ ಸುಧಾರಣೆ ಆಗುವುದಲ್ಲದೆ, ಕೈಗಾರಿಕೋದ್ಯಮಗಳ ವೈವಿಧ್ಯ ಹೆಚ್ಚಿ, ಬೇಸಾಯದ ಮೇಲಣ ಅವಲಂಬನೆಯ ಒತ್ತಡ ಕಡಿಮೆಯಾಗುತ್ತದೆ. ನಮ್ಮ ವ್ಯವಸಾಯಗಾರರು ಸಾಂಪ್ರದಾಯಕ ವ್ಯವಸಾಯವನ್ನು ಬಿಟ್ಟು ವೈಜ್ಞಾನಿಕವಾಗಿ ವ್ಯವಸಾಯವನ್ನು ನವೀಕರಣ ಮಾಡಿದಲ್ಲಿ ಮಾತ್ರ ಕೃಷಿ ಪ್ರಗತಿಯನ್ನು ಸಾಧಿಸಬಹುದು. ಬೇಸಾಯವನ್ನು ಒಂದು ಜೀವನವಿಧಾನವಾಗಿಯೇ ಮುಂದುವರಿಸದೆ, ಅದನ್ನು ಲಾಭದಾಯಕವಾದ ಉದ್ಯಮದಂತೆ ವ್ಯವಸ್ಥೆ ಮಾಡಲು ಅಗಾಧವಾದ ಬಂಡವಾಳವನ್ನು ಭೂ ಅಭಿವೃದ್ಧಿಯಲ್ಲಿ ಹೂಡಬೇಕಾಗಿದೆ.

ಭೂ ಅಭಿವೃದ್ಧಿ ಬ್ಯಾಂಕಿಗೆ ಅಡಿಪಾಯ ಹಾಕಿದ ಮೊದಲ ದೇಶ ಜರ್ಮನಿ. 1779ರಲ್ಲಿ ಒಬ್ಬ ವ್ಯಾಪಾರಿ ಕೃಷಿಗಾಗಿ ಸಾಲ ಕೊಡುವ ಸಂಸ್ಥೆಯನ್ನು ತೆಗೆಯಲು ಸೂಚಿಸಿದರು. ಭೂ ಅಭಿವೃದ್ಧಿ ಬ್ಯಾಂಕು ಈ ಮುಂದಿನ ತತ್ವಗಳ ಮೇಲೆ ಸ್ಥಾಪಿತವಾಯಿತು.

1 ಸಹಕಾರ ತತ್ವಗಳನ್ನು ಅನುಸರಿಸಬೇಕು.
2 ಸಾಲ ಕೊಡಲು ಒಂದು ರಾಜ್ಯದ ಮಿತಿ ಇರಬೇಕು.
3 ರಾಜ್ಯ ಸರ್ಕಾರಗಳು ಮೇಲ್ವಿಚಾರಣೆಯನ್ನು ನಡೆಸಬೇಕು.
4 ಋಣಪತ್ರದಂತೆ ಅದು ಸಾಲವನ್ನು ಒದಗಿಸುತ್ತಾ ಇರಬೇಕು.

1908ರಲ್ಲಿ ಡೆನ್‌ಮಾರ್ಕಿನಲ್ಲಿ ಕೃಷಿಗಾಗಿ ಸಾಲ ಕೊಡುವ ಮತ್ತೊಂದು ಸಂಸ್ಥೆ ಪ್ರಾರಂಭವಾಯಿತು. ಇದಾದ ಮೇಲೆ ಪ್ರಪಂಚದ ಬೇರೆಬೇರೆ ಭಾಗಗಳಲ್ಲಿ ಈ ತೆರದ ಸಂಸ್ಥೆಗಳು ಪ್ರಾರಂಭವಾದವು.

1883ರಲ್ಲಿ ಸರ್ಕಾರ ಕೃಷಿ ಅಭಿವೃದ್ಧಿಗಾಗಿ ಸಾಲ ಕೊಡುವ ಕಾನೂನನ್ನು ಮಾಡಿತು. ಈ ಮೊದಲು ಯಾವ ಸಂಸ್ಥೆಯಾಗಲಿ ವ್ಯಕ್ತಿಯಾಗಲಿ ಕೃಷಿ ಅಭಿವೃದ್ಧಿಗಾಗಿ ಸಾಲ ಕೊಡುತ್ತಿರಲಿಲ್ಲ. ಭಾರತದಲ್ಲಿ ಈ ಕಾನೂನು ವ್ಯವಸಾಯಸ್ಥರಿಗೆ ಸಾಲ ಕೊಡುವುದರ ಮೊದಲ ಹೆಜ್ಜೆ ಎಂದು ಹೇಳಬಹುದು.

ಮುಂಬಯಿ ಪ್ರಾಂತ್ಯದಲ್ಲಿ 1914ರಲ್ಲಿ ಸರ್ ವಿಠಲ್‌ದಾಸ್ ಥಾಕರಸೆಯವರು ಕೃಷಿಗಾಗಿ ಸಾಲ ಕೊಡಲು ಒಂದು ರೂಪರೇಖೆಯನ್ನು ಕೊಟ್ಟರು. ಆದರಲ್ಲೂ ಒಂದು ಪ್ರತ್ಯೇಕ ವ್ಯವಸ್ಥೆಗೆ ಶಿಫಾರಸು ಮಾಡಲಾಗಿತ್ತು.

ವ್ಯವಸಾಯಕ್ಕೆ ಸಾಲ ಕೊಡುವ ಸಲುವಾಗಿಯೇ ಬೇರೆಯಾದ ಒಂದು ಸಂಸ್ಥೆ ಇರಬೇಕೆಂಬುದು ಹಲವು ಸಭೆಗಳ ನಿಯೋಗಗಳ ಅಭಿಪ್ರಾಯವಾಗಿತ್ತು. ಇವುಗಳಲ್ಲಿ ಮುಖ್ಯವಾದವು ಕೇಂದ್ರ ಹಣಕಾಸು ವಿಚಾರಣಾ ಮಂಡಳಿ, ಸಹಕಾರ ಸಂಘಗಳ ನಿಬಂಧಕರ ಸಮಿತಿ, ಮತ್ತು ಇಂಗ್ಲೆಂಡಿನ ರಾಯಲ್ ಕಮಿಷನ್.

ನಮ್ಮ ದೇಶದಲ್ಲಿ ಮೊದಲ ಭೂ ಅಡಮಾನ ಬ್ಯಾಂಕನ್ನು 1921ರಲ್ಲಿ ಪಂಜಾಬ್ ರಾಜ್ಯದ ಜಾಂಗ್ ಎಂಬ ಜಿಲ್ಲೆಯಲ್ಲಿ ಸ್ಥಾಪಿಸಲಾಯಿತು. ಭೂ ಮಾಲೀಕರಿಗೆ ಅವರು ತುಂಬುವ ಕಂದಾಯದ 30ರಷ್ಟು ಹಣವನ್ನು ಈ ಬ್ಯಾಂಕ್ ರೈತರಿಗೆ ಸಾಲವಾಗಿ ಒದಗಿಸುತ್ತಿತ್ತು.

ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಭೂ ಅಡಮಾನ ಬ್ಯಾಂಕನ್ನು 1924ರಿಂದ ಈಚೆಗೆ ಸ್ಥಾಪಿಸಲಾಯಿತು.

ಆಗಿನ ಮೈಸೂರು ರಾಜ್ಯ 1925ರಲ್ಲೇ ಭೂ ಅಡಮಾನ ಬ್ಯಾಂಕನ್ನು ಸ್ಥಾಪಿಸಲು ಯೋಚನೆ ಮಾಡಿತು. ಮೈಸೂರು ಸರ್ಕಾರ ಈ ದೆಸೆಯಲ್ಲಿ ಕೃಷಿಕರ ಕುಂದು ಕೊರತೆ ಮತ್ತು ಅವನ್ನು ಪರಿಹರಿಸುವ ಬಗೆಯನ್ನು ತಿಳಿಯಲು ಒಂದು ಮಲೆನಾಡು ಅಭಿವೃದ್ಧಿ ಮಂಡಳಿಯನ್ನು ರಚಿಸಿತು. ಸಮಿತಿ ಅಧ್ಯಯನ ನಡೆಸಿ ಕೃಷಿ ಅಭಿವೃದ್ಧಿಗಾಗಿಯೇ ಸಾಲ ಒದಗಿಸುವ ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿತು. ಕಾರಣ ಸಾಹುಕಾರರು ಬಡ ರೈತರಿಗೆ ಹಣವನ್ನು ಸಾಲವಾಗಿ ಕೊಟ್ಟು ಅದಕ್ಕೆ ಜಾಸ್ತಿ ಬಡ್ಡಿ ಹಾಕಿ ಕೃಷಿಕರಿಗೆ ಹೆಚ್ಚಿನ ಆದಾಯವಿಲ್ಲದಂತೆ ಮಾಡುತ್ತಿದ್ದರು. ಇದರಿಂದ ಭೂ ಅಭಿವೃದ್ಧಿ ರೈತರಿಗೆ ಸಾಧ್ಯವಾಗುತ್ತಿರಲಿಲ್ಲ ಮತ್ತು ಶ್ರೀಮಂತರ ಹಿಡಿತದಿಂದ ರೈತರು ಸಂಪೂರ್ಣವಾಗಿ ಬಿಡುಗಡೆಯಾಗಬೇಕಾದರೆ ಅವರಿಗೆ ಸಾಲ ಕೊಡುವ ಒಂದು ಪ್ರತ್ಯೇಕ ಸಂಸ್ಥೆ ಸ್ಥಾಪಿಸಬೇಕೆಂದು ಸಮಿತಿ ಅಭಿಪ್ರಾಯಪಟ್ಟಿತು.

ಮಲೆನಾಡು ಅಭಿವೃದ್ಧಿ ಮಂಡಳಿಯ ಈ ಶಿಫಾರಸ್ಸನ್ನು ಸರ್ಕಾರ ಅಂಗೀಕರಿಸಿ ದೀರ್ಘಾವಧಿ ಸಾಲದ ವಿತರಣೆಗಾಗಿ ಸಹಕಾರಿ ಕ್ಷೇತ್ರದಲ್ಲಿ ಕೇಂದ್ರ ಅಡಮಾನ ಬ್ಯಾಂಕ್ (ಸೆಂಟ್ರಲ್ ಮಾರ್ಟ್‌ಗೇಜ್ ಬ್ಯಾಂಕ್) ಎಂಬ ಸಂಘದ ಸ್ಥಾಪನೆಗೆ ಏಪ್ರಿಲ್ 1928ರಲ್ಲಿ ಒಂದು

ಸದಾನಂದ ಚ. ಕಡಲಿ, ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಬೆಂಗಳೂರು ೫೬೦ ೦೧೮

ಸುಗ್ರೀವಾಜ್ಞೆ ಹೊರಡಿಸಿತು. ಇದರ ಕಾರ್ಯವ್ಯಾಪ್ತಿ ಮಲೆನಾಡಿನ ಮೂರು ತಾಲ್ಲೂಕಿಗೂ, ಮೈದಾನದ ಒಂದು ತಾಲ್ಲೂಕಿಗೂ, ಸೀಮಿತವಾಗಿತ್ತು. (ಅಂದರೆ ಕೊಪ್ಪ, ಸಾಗರ, ಮಂಜರಾಬಾದ್ ಮತ್ತು ತುಮಕೂರಿನಲ್ಲಿ ಜಮೀನು ಅಡಮಾನ ಬ್ಯಾಂಕುಗಳು ಸ್ಥಾಪಿತವಾದವು). ಕೇಂದ್ರ ಕಛೇರಿ ಬೆಂಗಳೂರಿನಲ್ಲಿತ್ತು. ಮೊದಲಿಗೆ ರೂ. 5 ಲಕ್ಷ ಷೇರು ಬಂಡವಾಳವಿದ್ದು, ರೂ 20 ಲಕ್ಷದವರೆಗೂ ಡಿಬೆಂಚರ್ ಸಾಲದ ಎತ್ತುವಳಿಗೆ ಅರ್ಹತೆ ಇದ್ದು, ಸರ್ಕಾರ ಸಾಲ ಪತ್ರಗಳ ಅಸಲು ಮತ್ತು ಬಡ್ಡಿಗಳ ಪಾವತಿಗೆ ಜಾಮೀನು ನಿಲ್ಲುವ ಬಗ್ಗೆಯೂ ಸರ್ಕಾರದ ಒಪ್ಪಿಗೆ ಇದ್ದಿತು. ಹೀಗೆ ಸರ್ಕಾರದಿಂದ ನಿಯಮಿತವಾದ ಈ ಬ್ಯಾಂಕ್ 1929ರ ನವೆಂಬರ್ 25ರಂದು ನೊಂದಾಯಿಸಲ್ಪಟ್ಟಿತು. ಸರ್ಕಾರ ನೇಮಿಸಿದ ಆಡಳಿತ ಮಂಡಳಿಯ ಮೊಟ್ಟಮೊದಲನೆಯ ಸಭೆ 1929ರ ನವೆಂಬರ್ 29ರಂದು ನಡೆದು, ಮೊಟ್ಟಮೊದಲನೆಯ ಸರ್ವಸದಸ್ಯರ ಸಭೆ 1931ರ ಮಾರ್ಚ್ 1ರಂದು ಸಮಾವೇಶಗೊಂಡಿತು.

## [1929 ಮತ್ತು 1984ರ ಬ್ಯಾಂಕಿನ ಸ್ಥಿತಿ]

| 1929 | | 1984 |
|---|---|---|
| 1 ಅಧಿಕೃತ ಷೇರು ಬಂಡವಾಳ | ರೂ 5 ಲಕ್ಷ | ರೂ 15 ಕೋಟಿ |
| 2 ಪಾವತಿಯಾದ ಷೇರು ಬಂಡವಾಳ | ರೂ 5 ಲಕ್ಷ | ರೂ 11 ಕೋಟಿ |
| 3 ಕಾದಿರಿಸಿದ ನಿಧಿ | — | ರೂ 9 ಕೋಟಿ |
| 4 ಭದ್ರತೆಯ ಆಧಾರದ ಮೇಲೆ ಸಾಲ ನೀಡುವ ಪದ್ಧತಿ | | ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸುವುದು. |
| 5 ಸಾಲಗಳ ಉದ್ದೇಶ : | | ವಿಶೇಷ ಯೋಜನೆಗಳಲ್ಲಿ ಸಾಲ ನೀಡುವ ಉದ್ದೇಶ : |
| (ಅ) ಹಳೆ ಸಾಲ ತೀರುವಳಿ ಮತ್ತು ಭೂ ಅಭಿವೃದ್ಧಿ | | (ಅ) ಸಣ್ಣ ನೀರಾವರಿ ಮತ್ತು ಕೃಷಿ ಯಾಂತ್ರೀಕರಣ |
| | | (ಆ) ತೋಟಗಾರಿಕೆ ಮತ್ತು ತೋಪುಗಳ ಯೋಜನೆ |
| | | (ಇ) ಹೈನುಗಾರಿಕೆ |
| | | (ಈ) ವೈವಿಧ್ಯಮಯ ಯೋಜನೆಗಳು |
| | | (ಉ) ಭೂ ಸುಧಾರಣೆ |
| | | (ಊ) ಹಳೆ ಬಾಕಿ ತೀರುವಳಿ ಮತ್ತು ಸಾಮಾನ್ಯ ಯೋಜನೆಯಲ್ಲಿ ಅನೇಕ ಉದ್ದೇಶಗಳು |
| 6 ಬ್ಯಾಂಕುಗಳ ಸಂಖ್ಯೆ : | | |
| (ಅ) ಕೇಂದ್ರ ಕಛೇರಿ | 1 | ಕೇಂದ್ರ ಕಛೇರಿ 1 |
| (ಆ) ಪ್ರಾದೇಶಿಕ ಭೂ ಅಭಿವೃದ್ಧಿ ಬ್ಯಾಂಕ್ | 4 | ಪ್ರಾದೇಶಿಕ ಭೂ ಅಭಿವೃದ್ಧಿ ಬ್ಯಾಂಕ್ 177 |
| (ಇ) ಜಿಲ್ಲಾ ಕಛೇರಿ | — | ಜಿಲ್ಲಾ ಕಛೇರಿ ರೂ 19 ಕೋಟಿ |
| 7 ಸಾಲ ವಿತರಣೆ | ರೂ 0.45 ಲಕ್ಷ | ಸಾಲ ವಿತರಣೆ ರೂ 35 ಕೋಟಿ |
| 8 ಹೊರಬಾಕಿ ಇರುವ ಸಾಲ | ರೂ 0.45 ಲಕ್ಷ | ರೂ. 144.46 ಕೋಟಿ |

### ಬ್ಯಾಂಕಿನ ಅಭಿವೃದ್ಧಿ

1929-1955 : ಈ ವರ್ಷಗಳಲ್ಲಿ ಬ್ಯಾಂಕು ಕೇವಲ ಹಳೆ ಬಾಕಿ ತೀರುವಳಿಗೆ ಮಾತ್ರ ಸಾಲ ಒದಗಿಸುತ್ತ ಬಂದಿತು. ಬ್ಯಾಂಕಿಗೆ ಬೇರೆ ರೀತಿಯ ಹೆಚ್ಚಿನ ಬಂಡವಾಳವಿರಲಿಲ್ಲವಾದ್ದರಿಂದ ಬ್ಯಾಂಕು ಹೆಚ್ಚಿನ ಪ್ರಮಾಣದಲ್ಲಿ ವ್ಯವಹಾರವನ್ನು ಮಾಡಲಾಗಲಿಲ್ಲ. ಈ ವರ್ಷಗಳಲ್ಲಿ ಬ್ಯಾಂಕು ಒಟ್ಟು ರೂ 1.67 ಕೋಟಿ ಸಾಲವನ್ನು ವಿತರಣೆ ಮಾಡಿತು.

1956-1963 : ರಿಸರ್ವ್ ಬ್ಯಾಂಕಿನವರು ಕೃಷಿ ಅಭಿವೃದ್ಧಿಗಾಗಿ ಸಾಲವನ್ನು ಕೊಡಲು ಹಣವನ್ನು ಕಾಯ್ದಿರಿಸಿದರು. ಇದರಿಂದ ಭೂ ಅಭಿವೃದ್ಧಿ ಬ್ಯಾಂಕಿಗೆ ಸಾಲ ದೊರೆತು ಬ್ಯಾಂಕು ಹಿಂದಿನ ವರ್ಷಗಳಿಗಿಂತ ಸ್ವಲ್ಪ ಪ್ರಗತಿಯನ್ನು ತೋರಿಸಿತು. ಈ ವರ್ಷಗಳಲ್ಲಿ ಒಟ್ಟು ರೂ 5.92 ಕೋಟಿ ಸಾಲ ವಿತರಣೆ ಮಾಡಿತು.

1964-1970 : ಈ ಕಾಲದಲ್ಲಿ ಬ್ಯಾಂಕಿನ ವ್ಯವಹಾರಕ್ಕೆ ಒಂದು ಹೊಸ ಕಳೆ ಬಂದಿತು ಎಂದು ಹೇಳಬಹುದು. ರಾಜ್ಯ ಸರ್ಕಾರದಿಂದ ಬ್ಯಾಂಕಿಗೆ ಬಾವಿ ಸಾಲಕ್ಕೆ ಹಣವನ್ನು ಕೊಡಲು ಮಂಜೂರಾತಿ ದೊರಕಿತು. ಇದುವರೆಗೂ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ತಕಾವಿ ಸಾಲ ಎಂಬ ರೂಪದಲ್ಲಿ ರೈತರಿಗೆ ಸಾಲವನ್ನು ಕೊಡುತ್ತಿದ್ದರೂ ಇಷ್ಟೇ ಅಲ್ಲದೆ ಅದೇ ವೇಳೆಗೆ ರಾಷ್ಟ್ರೀಯ ಮಟ್ಟದಲ್ಲಿ ಕೃಷಿ ಪುನರ್ಧನ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಈ ಸಂಸ್ಥೆಯ ಮೂಲ ಉದ್ದೇಶ ಕೃಷಿ ಅಭಿವೃದ್ಧಿಗಾಗಿ ಸಾಲ ಕೊಡುವ ಸಂಸ್ಥೆಗಳಿಗೆ ಪುನರ್ಧನದ ರೂಪದಲ್ಲಿ ಹಣವನ್ನು ಕೊಟ್ಟು ರೈತರ ಏಳಿಗೆಯನ್ನು ಮಾಡುವ ಉದ್ದೇಶದಿಂದ ಇದು ಸ್ಥಾಪಿತವಾಯಿತು. ಇದರಿಂದ ಅಡಮಾನ ಬ್ಯಾಂಕ್ ಹೊಸ ಯೋಜನೆಗಳನ್ನು ತಯಾರಿಸಿ ಹೆಚ್ಚಿನ ರೀತಿಯಲ್ಲಿ ರಾಜ್ಯದ ರೈತರಿಗೆ ಸಹಾಯ ಮಾಡುವಂತಾಯಿತು. ಈ ವೇಳೆಗೆ ಭೂ ಅಡಮಾನ ಬ್ಯಾಂಕಿನ ಹೆಸರನ್ನು ಭೂ ಅಭಿವೃದ್ಧಿ ಬ್ಯಾಂಕು ಎಂದು ಬದಲಾಯಿಸಲಾಯಿತು. ರೂ. 36.52 ಕೋಟಿ ಸಾಲವನ್ನು ಈ ವರ್ಷಗಳಲ್ಲಿ ಬ್ಯಾಂಕು ವಿತರಣೆ ಮಾಡಿತು.

1971-1976 : ಈ ಅವಧಿಯಲ್ಲಿ ಬ್ಯಾಂಕಿನ ಹೆಸರು ರಾಜ್ಯದ ಎಲ್ಲಾ ರೈತರಿಗೂ ತಿಳಿಯುವಂತೆ ಆಯಿತು. ಮತ್ತು ಬ್ಯಾಂಕಿನ ಧೋರಣೆಯನ್ನು ಅರಿತು ರೈತರು ಹೆಚ್ಚಿನ ನೆರವನ್ನು ಪಡೆಯಲು

ಹಸ್ತಿದರು. ವಿಶ್ವ ಬ್ಯಾಂಕಿನ ನೆರವು ಪಡೆಯುವುದರಲ್ಲಿ ಮೈಸೂರು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕ್ 2ನೆಯದಾಯಿತು. ವಿಶ್ವ ಬ್ಯಾಂಕ್ ಒದಗಿಸಿದ ರೂ. 52 ಕೋಟಿಯನ್ನು ಸಣ್ಣ ನೀರಾವರಿ, ಕೃಷಿ ಯಾಂತ್ರೀಕರಣ, ತೋಟಗಾರಿಕೆ, ಭೂ ಸಮತಲನ ಮತ್ತು ವೈವಿಧ್ಯಮಯ ಯೋಜನೆಯಲ್ಲಿ ರೈತರಿಗೆ ನೆರವು ಸಾಲವನ್ನು ಒದಗಿಸಿತು; ಈ ವರ್ಷಗಳಲ್ಲಿ ಬೇರೆ ಬೇರೆ ಸಂಸ್ಥೆಯ ನೆರವಿಲ್ಲದೆ ವಿಶ್ವ ಬ್ಯಾಂಕಿನ ನೆರವು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿಗೆ ದೊರೆಯಿತು. 1974ರಲ್ಲಿ ಕೃಷಿ ಪುನರ್ಧನ ಸಂಸ್ಥೆಯ ಹೆಸರನ್ನು ಕೃಷಿ ಪುನರ್ಧನ ಸಂಸ್ಥೆಯ ಹೆಸರನ್ನು ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಎಂದು ಬದಲಾಯಿಸಲಾಯಿತು. ಇದರಿಂದ ಆ ಸಂಸ್ಥೆಯ ಧೋರಣೆಯಲ್ಲಿ ಬದಲಾಗಿ ಗ್ರಾಮೀಣ ಜನತೆಗೆ ಇನ್ನೂ ಹೆಚ್ಚಿನ ಸಹಾಯ ಮಾಡುವಂತಹ ಹೊಸ ಹೊಸ ಯೋಜನೆಗಳು ರೂಪುಗೊಂಡವು. ಇದರಿಂದ ಭೂ ಅಭಿವೃದ್ಧಿ ಬ್ಯಾಂಕಿಗೂ ಸಾಕಷ್ಟು ನೆರವು ಲಭಿಸಿ ರೈತರಿಗೆ ಇನ್ನೂ ಹೆಚ್ಚಿನ ಸಾಲವನ್ನು ಕೊಡುವಂತೆ ಆಯಿತು. ರೂ. 90.62 ಕೋಟಿ ಸಾಲವನ್ನು ಬ್ಯಾಂಕು ಈ ವರ್ಷಗಳಲ್ಲಿ ವಿತರಣೆ ಮಾಡಿತು.

1977–1982 : ಈ ವೇಳೆಗೆ ಬ್ಯಾಂಕಿನ ವ್ಯವಹಾರ ತುಂಬಾ ಪ್ರಗತಿಯಲ್ಲಿ ಇದ್ದಿತು. ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಎಲ್ಲಾ ಯೋಜನೆಗಳಲ್ಲಿ ಬ್ಯಾಂಕ್ ರೈತರಿಗೆ ನೆರವನ್ನು ಕೊಡುವಂತೆ ಆಯಿತು. ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೃಷಿ ಅಭಿವೃದ್ಧಿಗಾಗಿ ದೀರ್ಘಾವಧಿ ಸಾಲವನ್ನು ಒದಗಿಸುತ್ತಿತ್ತು. ಮತ್ತು ರಿಸರ್ವ್ ಬ್ಯಾಂಕ್ ಆದರ ಸಹ ಬ್ಯಾಂಕುಗಳಿಂದ ಮಧ್ಯಮಾವಧಿ ಮತ್ತು ಅಲ್ಪಾವಧಿ ಸಾಲವನ್ನು ಒದಗಿಸುತ್ತಿತ್ತು. ಇದರಿಂದ ರೈತರು ಬೇರೆ ಬೇರೆ ಕಡೆ ಸಾಲಕ್ಕಾಗಿ ಪರದಾಡಬೇಕಿತ್ತು. ಕೃಷಿ ಅಭಿವೃದ್ಧಿಗಾಗಿ ಎಲ್ಲಾ ರೀತಿಯ ಸಾಲವನ್ನು ಒಂದೇ ಬ್ಯಾಂಕ್ ಒದಗಿಸುವಂತಾಗಬೇಕೆಂದು ಶ್ರೀ ಬಿ. ಶಿವರಾಮನ್ನರ ಸಲಹೆಯಂತೆ ರಾಷ್ಟ್ರೀಯ ಮಟ್ಟದಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕನ್ನು 12ನೆಯ ಜುಲೈ 1982ರಲ್ಲಿ ಸ್ಥಾಪಿಸಲಾಯಿತು. ಈ ಬ್ಯಾಂಕ್ ಕೃಷಿ ಪುನರ್ಧನ ಕೆಲಸ ಕಾರ್ಯಗಳನ್ನು ವಹಿಸಿಕೊಂಡು ಕೃಷಿ ಕಾರ್ಯಗಳಿಗೆ ಸಾಲವನ್ನು ಒದಗಿಸುತ್ತಾ ಇದೆ. ಈ ವರ್ಷಗಳಲ್ಲಿ ಬ್ಯಾಂಕು ಒಟ್ಟು ರೂ. 152.73 ಕೋಟಿ ಹಣದ ನೆರವನ್ನು ರಾಜ್ಯದ ರೈತರಿಗೆ ಒದಗಿಸಿತು.

### ಸಂಸ್ಥೆಯ ವಿನ್ಯಾಸ

ದೇಶದಲ್ಲಿನ ಭೂ ಅಭಿವೃದ್ಧಿ ಬ್ಯಾಂಕುಗಳು ಎರಡು ಬಗೆಯ ವಿನ್ಯಾಸ ಹೊಂದಿವೆ. ಏಕ (ಯುನಿಟರಿ) ಅಥವಾ ಸಂಯುಕ್ತ ಪದ್ಧತಿ (ಫೆಡರಲ್). ಏಕ ಸಂಸ್ಥೆಗಳಲ್ಲಿ ಕೇಂದ್ರ ಬ್ಯಾಂಕು ಪ್ರಧಾನ. ಅದರ ಶಾಖೆಗಳೇ ತಾಲ್ಲೂಕು ಅಥವಾ ಅತ್ಯಂತ ಕನಿಷ್ಠ ಮಟ್ಟದಲ್ಲಿದ್ದು, ಶಾಖೆಗಳಿಲ್ಲದರ ಆಡಳಿತದ ಅಧಿಕಾರವನ್ನು ಕೇಂದ್ರ ಬ್ಯಾಂಕು ಹೊಂದಿರುತ್ತದೆ. ಸಂಯುಕ್ತ ಸಂಸ್ಥೆಗಳಲ್ಲಿ ಕೇಂದ್ರ ಬ್ಯಾಂಕ್ ಅತ್ಯಂತ ಕನಿಷ್ಠ ಮಟ್ಟದಲ್ಲಿರುವ ಆಡಳಿತ ಸ್ವಾಯತ್ತತೆಯುಳ್ಳ (ಅಟಾನಮಸ್) ಸ್ವತಂತ್ರ ಸಂಸ್ಥೆಗಳ (ಸೊಸೈಟಿಗಳು ಅಥವಾ ಪ್ರಾಥಮಿಕ ಬ್ಯಾಂಕುಗಳು) ಒಕ್ಕೂಟವಾಗಿದ್ದು, ಹಣಕಾಸು ಹತೋಟಿ ಮಾತ್ರ ಕೇಂದ್ರೀಕೃತವಾಗಿರುತ್ತದೆ. ಪ್ರತಿಯೊಂದು ಸಹಕಾರಿ ಸಂಘ ಅಥವಾ ಪ್ರಾ.ಭೂ.ಅ. ಬ್ಯಾಂಕು ಕೇಂದ್ರ ಬ್ಯಾಂಕಿನಲ್ಲಿ ಷೇರುಗಳನ್ನು ಹೊಂದಿರುತ್ತದೆ.

ಕರ್ನಾಟಕ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು, ಪ್ರಾ.ಭೂ.ಅ. ಬ್ಯಾಂಕುಗಳ ಸಂಯುಕ್ತ ಸಂಸ್ಥೆಯಾಗಿದ್ದು, 177 ಪ್ರಾ.ಭೂ.ಅ. ಬ್ಯಾಂಕುಗಳ ಸದಸ್ಯತ್ವವನ್ನು ಹೊಂದಿದೆ. ಅತ್ಯಂತ ಹೆಚ್ಚಿನ ಷೇರು ಬಂಡವಾಳವನ್ನು ಹೊಂದಿರುವ ಸರ್ಕಾರ ಸಹ ಕೇಂದ್ರ ಬ್ಯಾಂಕಿನಲ್ಲಿ ಸದಸ್ಯತ್ವ ಹೊಂದಿದೆ. ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಕರ್ನಾಟಕ ಕೃಷಿ ಕೈಗಾರಿಕಾ ಮಂಡಳಿ, (ಆಗ್ರೊ—ಇಂಡಸ್ಟ್ರೀಸ್ ಕಾರ್ಪೊರೇಷನ್) ಕರ್ನಾಟಕ ಉಗ್ರಾಣ ಸಂಸ್ಥೆ, ಇವು ಬ್ಯಾಂಕಿನ ಸದಸ್ಯತ್ವವನ್ನು ಹೊಂದಿವೆ.

### ಕೇಂದ್ರ ಬ್ಯಾಂಕಿನ ಆಡಳಿತ ವ್ಯವಸ್ಥೆ

ಕೇಂದ್ರ ಬ್ಯಾಂಕಿನ ಆಡಳಿತ ವ್ಯವಹಾರದ ಪರಮಾಧಿಕಾರವನ್ನು ಸರ್ವಸದಸ್ಯರ ಸಭೆ ಹೊಂದಿರುತ್ತದೆ. ಪ್ರತಿ ವರ್ಷವೂ ಸೆಪ್ಟೆಂಬರ್ ತಿಂಗಳೊಳಗೆ ಸರ್ವಸದಸ್ಯರ ಸಭೆಯನ್ನು ಕರೆಯಲಾಗುವುದು. ಈ ಸಭೆಯಲ್ಲಿ ಪ್ರತಿಯೊಂದು ಪ್ರಾ.ಭೂ.ಅ. ಬ್ಯಾಂಕಿನ ಪ್ರತಿನಿಧಿಗಳಿರುತ್ತಾರೆ. ಒಂದು ಜಿಲ್ಲೆಯ ಪ್ರಾ.ಭೂ.ಅ. ಬ್ಯಾಂಕಿನ ಪ್ರತಿನಿಧಿಗಳು ಆಯಾ ಜಿಲ್ಲಾ ನಿರ್ದೇಶಕರನ್ನು ಆಯ್ಕೆ ಮಾಡಬೇಕು. ಹೀಗೆ ಆಯ್ಕೆಗೊಂಡ ನಿರ್ದೇಶಕರುಗಳ ಅಧಿಕಾರಾವಧಿ 3 ವರ್ಷ. ಅಂದರೆ ಪ್ರತಿ ವರ್ಷ $\frac{1}{3}$ ಭಾಗದಷ್ಟು ನಿರ್ದೇಶಕರು ನಿವೃತ್ತಿ ಹೊಂದಿ ಆ ನಿರ್ದೇಶಕರ ಸ್ಥಾನಕ್ಕೆ ಮಾತ್ರ ಚುನಾವಣೆ ನಡೆಯುತ್ತದೆ. ಈಗ ಬ್ಯಾಂಕಿನಲ್ಲಿ ಒಟ್ಟು 24 ಜನ ನಿರ್ದೇಶಕರಿರುವರು. ಅವುಗಳಲ್ಲಿ 16 ಚುನಾಯಿತ ಪ್ರತಿನಿಧಿಗಳು ಮತ್ತು 8 ಜನ ಸರ್ಕಾರದಿಂದ ನೇಮಿಸಲ್ಪಟ್ಟವರು. ಸಹಕಾರ ಇಲಾಖೆಯ ಕಾರ್ಯದರ್ಶಿ, ಸಹಕಾರ ಸಂಘಗಳ ನಿಬಂಧಕರು, ರೇಷ್ಮೆ ಇಲಾಖೆಯ ರಾಜ್ಯ ಭೂ.ಅ. ಬ್ಯಾಂಕಿನ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಮುಖ್ಯ ಅಭಿಯಂತರು, ತೋಟಗಾರಿಕೆಯ ಇಲಾಖೆಯ ನಿರ್ದೇಶಕರು, ರೇಷ್ಮೆ ಇಲಾಖೆಯ ನಿರ್ದೇಶಕರು, ಪಶುಸಂಗೋಪನಾ ಇಲಾಖೆಯ ನಿರ್ದೇಶಕರು, ಸರ್ಕಾರದಿಂದ ನೇಮಿಸಲ್ಪಟ್ಟಿರುತ್ತಾರೆ. ಸಹಕಾರ ಕಾನೂನಿನ ಹೊಸ ನಿಬಂಧನೆಗಳ ಪ್ರಕಾರ ಸರ್ಕಾರ ಅಧಿಕಾಕಾರೇತರ ವ್ಯಕ್ತಿಗಳನ್ನು ಬ್ಯಾಂಕಿನ ನಿರ್ದೇಶಕರನ್ನಾಗಿ ನೇಮಿಸಬಹುದು. ಈ ಪ್ರಕಾರ ಹೊಂದಾಣಿಕೆಗಾಗಿ ಆಯಾ ಕೇಂದ್ರ ಸಂಸ್ಥೆಯ ಅಧ್ಯಕ್ಷರುಗಳು, ಸ್ಥಾನಬಲದ ಪ್ರಯುಕ್ತ ಪರಸ್ಪರ ಸಂಸ್ಥೆಗಳ ನಿರ್ದೇಶಕರಾಗಿರುತ್ತಾರೆ.

ಹೀಗೆ ಚುನಾಯಿಸಲ್ಪಟ್ಟ ಆಡಳಿತ ಮಂಡಳಿ ತನ್ನ ಮೊದಲನೆಯ ಸಭೆಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರುಗಳನ್ನು ಚುನಾಯಿಸುತ್ತದೆ. ದೈನಂದಿನ ತ್ವರಿತಗತಿಯ ಕಾರ್ಯ ನಡವಳಿಕೆಗೆ ಕೆಲವು ಉಪಸಮಿತಿಗಳನ್ನು ಅಂದರೆ ಕಾರ್ಯ ನಿರ್ವಾಹಕ ಸಮಿತಿ (ಎಕ್ಸಿಕ್ಯೂಟಿವ್ ಕಮಿಟಿ), ಸಾಲ ಮಂಜೂರಾತಿ ಉಪಸಮಿತಿ (ಲೋನ್‌ಸಬ್-ಕಮಿಟಿ) ಕಟ್ಟಡದ ಉಪಸಮಿತಿ (ಬಿಲ್ಡಿಂಗ್ ಸಬ್-ಕಮಿಟಿ) ಮೊದಲಾದವುಗಳನ್ನು ರಚಿಸಲಾಗಿದೆ.

ಆ ಬ್ಯಾಂಕಿನ ಆಡಳಿತ ಮಂಡಳಿ ಬ್ಯಾಂಕಿನ ಕಾರ್ಯನಿರ್ವಹಣೆಗೆ ಆಗಾಗ್ಗೆ, ಅಂದರೆ ಬೈಲಾ ಪ್ರಕಾರ ಕೊನೇ ಪಕ್ಷ ದ್ವೈಮಾಸಿಕವಾದರೂ, ಸೇರಬೇಕು. ಮಂಡಳಿಯ ಬೈಲಾದ ರೀತ್ಯ ಹಕ್ಕು ಬಾಧ್ಯತೆಗೆ ಒಳಪಟ್ಟು ಬ್ಯಾಂಕಿನ ಆಡಳಿತ ಕಾರ್ಯಭಾರದ ಬಗ್ಗೆ ಸಾಲಗಳ ವಿತರಣಾ ಧೋರಣೆಗಳ ಬಗ್ಗೆ, ಹಣಕಾಸು ವ್ಯವಹಾರದ ಬಗ್ಗೆ ವಿಶಾಲವಾದ ಕಾರ್ಯ ನೀತಿಯನ್ನು ರೂಪಿಸುತ್ತಿದೆ. ಮತ್ತು ಕೆಲವು ಅಧಿಕಾರವನ್ನು ದೈನಂದಿನ ಕಾರ್ಯನಿರ್ವಹಣೆಯ ಅನು

ಕೂಲಕ್ಕೆ ಅಧ್ಯಕ್ಷರಿಗೂ ಕಾರ್ಯ ನಿರ್ವಾಹಕ ನಿರ್ದೇಶಕರಿಗೂ ವಹಿಸಿಕೊಟ್ಟಿದೆ.

**ಪ್ರಾಥಮಿಕ ಬ್ಯಾಂಕಿನ ಆಡಳಿತ ವ್ಯವಸ್ಥೆ**

ಪ್ರತಿಯೊಂದು ಪ್ರಾಥಮಿಕ ಸಂಸ್ಥೆಯೂ ಸ್ವಯಂ ಆಡಳಿತಾಧಿಕಾರವನ್ನು ಹೊಂದಿರುತ್ತದೆ. ಅದರ ನಿರ್ವಹಣೆ, ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಚುನಾಯಿತರಾದವರನ್ನು ಒಳಗೊಂಡ ಆಡಳಿತ ಮಂಡಳಿಯ ಜವಾಬ್ದಾರಿ. ಮಂಡಳಿಯ ಸದಸ್ಯತ್ವ 9 ಜನರಿಗೆ ಮೀರದಂತೆ ಪ್ರತಿಯೊಂದು ಹೋಬಳಿಗೂ ಒಬ್ಬ ಪ್ರತಿನಿಧಿಯನ್ನು ಹೊಂದಿದ್ದು, ಒಬ್ಬ ಪ್ರತಿನಿಧಿಯು ಸದಸ್ಯರಿಂದ ಚುನಾಯಿಸಲ್ಪಡಬೇಕು. ಆಡಳಿತ ಮಂಡಳಿ ಪ್ರಾಥಮಿಕ ಬ್ಯಾಂಕುಗಳ ಮಂಜೂರಾದ ಉಪನಿಯಮಗಳ ಚೌಕಟ್ಟಿನಲ್ಲಿ ಕಾರ್ಯನಿರ್ವಹಿಸಬೇಕು.

**ಉಪಸಂಹಾರ**

ಬ್ಯಾಂಕು ಗ್ರಾಮೀಣ ಜನರಿಗೆ ಇನ್ನೂ ಹತ್ತಿರವಾಗಲು ಇದರ ಹೆಸರನ್ನು 'ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್'ಎಂದು ಬದಲಾಯಿಸಲು ಸಹಕಾರಿ ಅಧಿನಿಯಮದಲ್ಲಿ ಯುಕ್ತ ತಿದ್ದುಪಡಿ ತರಲಾಗಿದೆ. ಈವರೆಗೂ ವ್ಯವಸಾಯಗಾರರಿಗೆ ಮಾತ್ರ ಬ್ಯಾಂಕ್ ಸಾಲ ಒದಗಿಸುತ್ತಿತ್ತು, ಇನ್ನು ಮುಂದೆ ಕೃಷಿ ಕಾರ್ಮಿಕರಿಗೂ ಬ್ಯಾಂಕಿನಿಂದ ಸಾಲ ದೊರೆಯಲಿದೆ. ಇದರಿಂದ ಗ್ರಾಮೀಣ ಜನರಿಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೇರೆ ಬೇರೆ ಯೋಜನೆಗಳಲ್ಲಿ ಸಾಲವನ್ನು ಕೊಟ್ಟು ಗ್ರಾಮೀಣಾಭಿವೃದ್ಧಿಗೆ ಹೆಚ್ಚಿನ ಸಾಲ ಒದಗಿಸಬಹುದು. ಈ ವರೆಗೆ ವ್ಯವಸಾಯಗಾರರಿಗೆ ಮಾತ್ರ, ಎಂದರೆ 6,24,354 ಜನರಿಗೆ ಸುಮಾರು ರೂ. 285.35 ಕೋಟಿ ಸಾಲ ಕೊಟ್ಟಿದೆ. ಇನ್ನು ಮುಂದೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ರೈತರೂ ಕೃಷಿ ಕಾರ್ಮಿಕರೂ ಈ ಬ್ಯಾಂಕಿನ ನೆರವನ್ನು ಪಡೆದು ರಾಜ್ಯದ ಮತ್ತು ಗ್ರಾಮದ ಏಳಿಗೆ ಇನ್ನೂ ತೀವ್ರವಾಗಿ ಆಗುತ್ತದೆ ಎಂದು ನಿರೀಕ್ಷಿಸಬಹುದು. ★

● ● ●

## ನಮೂನೆ IV

(ನಿಯಮ 8ನ್ನು ನೋಡಿ)

| | |
|---|---|
| 1 ಪ್ರಕಟನೆಯ ಸ್ಥಳ | ಬೆಂಗಳೂರು 560002 |
| 2 ನಿಯತಕಾಲಿಕದ ಅವಧಿ | ಅರ್ಧವಾರ್ಷಿಕ |
| 3 ಮುದ್ರಕರ ಹೆಸರು | **ಶ್ರೀ ಜಿ. ಎಚ್. ಕೃಷ್ಣಮೂರ್ತಿ** |
| ರಾಷ್ಟ್ರಿಕತೆ | ಭಾರತೀಯ |
| ವಿಳಾಸ | ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್<br>ಗಡಿಯಾರ ಗೋಪುರ ಚೌಕ, ಮೈಸೂರು 570 001 |
| 4 ಪ್ರಕಾಶಕರ ಹೆಸರು | **ಶ್ರೀ. ಚೋ. ನಂಜಪ್ಪ** |
| ರಾಷ್ಟ್ರಿಕತೆ | ಭಾರತೀಯ |
| ವಿಳಾಸ | ಪ್ರಧಾನ ಕಾರ್ಯದರ್ಶಿಯ ಪರ, ಸಮನ್ವಯ ಸಮಿತಿ (ರಿ)<br>ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು<br>ಭಾರತೀಯ ಸ್ಟೇಟ್ ಬ್ಯಾಂಕ್<br>22 ಜಯಚಾಮರಾಜೇಂದ್ರ ರಸ್ತೆ<br>ಬೆಂಗಳೂರು 560 002 |
| 5 ಸಂಪಾದಕರ ಹೆಸರು | **ಎಚ್ಚೆಸ್ಕೆ** |
| ರಾಷ್ಟ್ರೀಕತೆ | ಭಾರತೀಯ |
| ವಿಳಾಸ | 41 ಆರನೆಯ ಮುಖ್ಯ ರಸ್ತೆ, ಸರಸ್ವತಿಪುರ,<br>ಮೈಸೂರು 570 009 |
| 6 ಒಟ್ಟುಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ ಅಥವಾ ಪಾಲುದಾರರ ಪತ್ರಿಕೆಯ ಮಾಲೀಕರ ಹೆಸರು ವಿಳಾಸಗಳು | **ಸಮನ್ವಯ ಸಮಿತಿ (ರಿ)**<br>**ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು**<br>ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು 560 002 |

ನಾನು, ಚೋ ನಂಜಪ್ಪ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದವೆಂದು ಈ ಮೂಲಕ ಘೋಷಿಸುತ್ತೇನೆ.

**ಚೋ. ನಂಜಪ್ಪ**
ಪ್ರಕಾಶಕ

# ರಾಜ್ಯದ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು

**ಮಲ್ಲಿಕಾರ್ಜುನ ಒಗ್ಗಣ್ಣನವರ**

ಭಾರತದ ಬ್ಯಾಂಕಿಂಗ್ ವಲಯದಲ್ಲಿ, ಅದರಲ್ಲಿಯೂ ಸಹಕಾರಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ, ಜಿಲ್ಲಾ ಕೇಂದ್ರಿಯ ಬ್ಯಾಂಕುಗಳು ಅತಿ ಮಹತ್ವದ ಸ್ಥಾನ ವಹಿಸಿವೆ. ಕಳೆದ ಕೆಲವು ದಶಕಗಳ ಪೂರ್ವದಲ್ಲಿ ಅಂದರೆ ಇಂದಿನ ವಾಣಿಜ್ಯ ಬ್ಯಾಂಕುಗಳು ದೇಶದ ಮೂಲೆ ಮೂಲೆ ಗಳಲ್ಲಿ ತಮ್ಮ ಶಾಖೆಗಳನ್ನು ತೆರೆಯುವ ಪೂರ್ವದಲ್ಲಿ, ಸಣ್ಣಪುಟ್ಟ ನಗರಗಳಲ್ಲಿಯೂ ದೊಡ್ಡ ಗ್ರಾಮೀಣ ಪ್ರದೇಶಗಳಲ್ಲಿಯೂ ಪ್ರಪ್ರಥಮವಾಗಿ ಬ್ಯಾಂಕಿಂಗ್ ಸೌಲಭ್ಯವನ್ನೊದಗಿಸಿಕೊಟ್ಟ ಕೀರ್ತಿ ಈ ಬ್ಯಾಂಕುಗಳಿಗೆ ಸಲ್ಲುತ್ತದೆ.

ಪ್ರಾಥಮಿಕ ವ್ಯವಸಾಯ ಸಹಕಾರಿ ಪತ್ತಿನ ಸಂಘಗಳು ಸಾಕಷ್ಟು ಸಾಲ ಪಡೆಯಲು, ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ಪಡೆಯಲು, ಜಿಲ್ಲಾ ಮಟ್ಟದಲ್ಲಿ ರಚಿಸಿಕೊಂಡ ಒಕ್ಕೂಟಗಳೇ ಜಿಲ್ಲಾ ಕೇಂದ್ರೀಯ ಬ್ಯಾಂಕುಗಳು.

## ಪಾತ್ರ

ಸಹಕಾರಿ ಬೇಸಾಯ ಮತ್ತು ಮತ್ತು ವಿತರಣ ವ್ಯವಸ್ಥೆಯ ಮೂರು ಹಂತದ ರಚನೆಯಲ್ಲಿ. ಜಿಲ್ಲಾ ಸಹಕಾರ ಮಧ್ಯವರ್ತಿ ಬ್ಯಾಂಕುಗಳು ಅತಿ ಮಹತ್ವದ ಪಾತ್ರವನ್ನು ವಹಿಸಿವೆ. ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಎಲ್ಲಾ ಸದಸ್ಯ ಸಹಕಾರಿ ಸಂಘಗಳಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲವನ್ನೊದಗಿಸಿ, ಅವುಗಳು ಸಮರ್ಪಕವಾಗಿ ಕೆಲಸಮಾಡಲು, ಅವುಗಳಿಗೆ ಸೂಕ್ತ ಮಾರ್ಗದರ್ಶನ, ಮೇಲ್ವಿಚಾರಣೆ ಹಾಗೂ ಅವುಗಳ ಕಾರ್ಯಗಳ ಮೇಲೆ ನಿಯಂತ್ರಣ ಮಾಡುವ ನೈತಿಕ ಹೊಣೆ ಹೊತ್ತು ಜಿಲ್ಲಾಮಟ್ಟದ ಸಹಕಾರಿ ಕ್ಷೇತ್ರ ದಲ್ಲಿ ಸಹಕಾರಿ ಸಂಘಗಳ ಸಮೃದ್ಧ ಬೆಳವಣಿಗೆಯ ಪೋಷಕ ಸಂಸ್ಥೆ ಗಳಾಗಿ ಈ ಬ್ಯಾಂಕುಗಳು ಸೇವೆ ಸಲ್ಲಿಸುತ್ತಿವೆ. ಇದು ಜಿಲ್ಲೆಯಲ್ಲಿಯ ಸರಕು ಸಹಕಾರ ಸಂಘಗಳಿಗೆ ಅಂತಿಮವಾಗಿ ಸಾಲ ಒದಗಿಸುವ ಜಿಲ್ಲಾ ಸಹಕಾರಿ ಕ್ಷೇತ್ರದ ಏಕಮೇವ ಮೇಟಿ ಸಂಸ್ಥೆಗಳಾಗಿವೆ (ಪಿವೊಟಲ್ ಆರ್ಗನೈಸೇಷನ್). ಇವು ನಗರ ಸಹಕಾರಿ ಬ್ಯಾಂಕುಗಳಿಗೆ, ಕೈಗಾರಿಕಾ ಸಹಕಾರಿ ಬ್ಯಾಂಕುಗಳಿಗೆ ಹಾಗೂ ಪತ್ತಿನ ಮತ್ತು ಪತ್ತೇತರ ಪ್ರಾಥಮಿಕ ಸಂಘಗಳಿಗೆ ಸಾಲ ಒದಗಿಸುವುದರಿಂದ ಇದನ್ನು ಜಿಲ್ಲೆ ಯಲ್ಲಿನ ಸಹಕಾರಿ ಬ್ಯಾಂಕುಗಳ ಬ್ಯಾಂಕೆಂದು ಸಹ ಕರೆಯಬಹುದು.

ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕುಗಳು ರಾಜ್ಯ ಸಹಕಾರಿ ಬ್ಯಾಂಕು, ನಬಾರ್ಡ್ ಮತ್ತು ಗ್ರಾಮೀಣ ಪತ್ತಿನ ಸಹಕಾರಿ ಸಂಘ ಗಳ ನಡುವೆ ಮಧ್ಯವರ್ತಿಗಳಾಗಿ. ರೈತರ ಸಾಲದ ಮೇಲಿನ ಬಡ್ಡಿ ದರ ಹೆಚ್ಚಾಗಲು ಕಾರಣವಾಗಿದ್ದರೂ, ಗ್ರಾಮೀಣ ಪತ್ತಿನ ಸಹಕಾರ ಸಂಘಗಳಿಗೆ ಅಧಿಕವಾಗಿ, ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲ ಗಳನ್ನೊದಗಿಸಿಕೊಡುವುದಕ್ಕಾಗಿ ಹಾಗೂ ಈ ಸಂಘಗಳಿಗೆ ಯೋಗ್ಯ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಗಳ ಮೇಲೆ ಸೂಕ್ತ ನಿಯಂತ್ರಣವಿಟ್ಟು, ಅವು ಸಮರ್ಪಕವಾಗಿ ನಡೆಯುವಂತೆ ನೋಡು ವುದಕ್ಕಾಗಿ, ಈ ಬ್ಯಾಂಕುಗಳು ಮುಂದುವರಿಯುವುದು ಅತ್ಯಾವಶ್ಯಕ ವಾಗಿದೆ. ಅಲ್ಲದೇ ಈ ಬ್ಯಾಂಕುಗಳು ಅಸ್ತಿತ್ವದಲ್ಲಿ ಬರದಿದ್ದರೆ, ರಾಷ್ಟ್ರಮಟ್ಟದ ನಬಾರ್ಡ್‌ಗೆ, ರಾಜ್ಯಮಟ್ಟದ ಅಪೆಕ್ಸ್ ಬ್ಯಾಂಕ್ ನೊಂದಿಗೆ ಗ್ರಾಮೀಣ ಮಟ್ಟದಲ್ಲಿಯ ಸಮಸ್ತ ಬೇಸಾಯ ಪತ್ತಿನ ಸಹಕಾರ ಸಂಘಗಳಿಗೆ ಸಾಲ ಹಂಚಲು ಹಾಗೂ ಹಂಚಿದ ಸಾಲವನ್ನು ವಸೂಲು ಮಾಡಲು, ರಾಜ್ಯಮಟ್ಟದ ರಾಜ್ಯ ಸಹಕಾರಿ ಬ್ಯಾಂಕಿ ನೊಂದಿಗೆ ವ್ಯವಹರಿಸುವುದು ಅತಿ ಕಠಿಣವಾಗಬಲ್ಲದೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

## ಕಲಾಪ

ಜಿಲ್ಲಾ ಕೇಂದ್ರೀಯ ಬ್ಯಾಂಕುಗಳು 1912ರಲ್ಲಿ ರಚನೆಯಾದ ದ್ವಿತೀಯ ಸಹಕಾರಿ ಅಧಿನಿಯಮದ ಮೇರೆಗೆ ರಾಷ್ಟ್ರಾದ್ಯಂತ ಜಾರಿ ಯಲ್ಲಿ ಬಂದಿದ್ದರೂ, ಪ್ರಾಥಮಿಕ ಬೇಸಾಯ ಪತ್ತಿನ ಸಂಘಗಳಿಗೆ ಸಾಕಷ್ಟು ಸಾಲ ಒದಗಿಸಲು 1906ರಿಂದಲೇ ರಾಷ್ಟ್ರದ ಕೆಲವೊಂದು ಭಾಗಗಳಲ್ಲಿ ಸಹಕಾರಿ ಪತ್ತಿನ ಸಂಘಗಳ ರೂಪದಲ್ಲಿ ಇವು ಜನ್ಮ ತಳೆ ದವು. 1906ರಲ್ಲಿ ಅಜ್ಮೀರದಲ್ಲಿ ರಚನೆಯಾದ ಕೇಂದ್ರೀಯ ಬ್ಯಾಂಕ್ ಭಾರತದ ಪ್ರಪ್ರಥಮ ಸಹಕಾರ ಕೇಂದ್ರೀಯ ಬ್ಯಾಂಕೆಂದು ಹೇಳ ಬಹುದು.

ಈ ಜಿಲ್ಲಾ ಸಹಕಾರ ಮಧ್ಯವರ್ತಿ ಬ್ಯಾಂಕುಗಳನ್ನು ಕೇವಲ ಪ್ರಾಥಮಿಕ ಸಂಘಗಳ ಸದಸ್ಯತ್ವದಿಂದ ಕೂಡಿದ ಹಾಗೂ ಅಲ್ಪಮಟ್ಟ ದಲ್ಲಿ ವ್ಯಕ್ತಿ ಸದಸ್ಯರಿಂದಲೂ ಅಧಿಕ ಮಟ್ಟದಲ್ಲಿ ಪ್ರಾಥಮಿಕ ಸಹಕಾರಿ ಸಂಘಗಳ ಸದಸ್ಯತ್ವದಿಂದಲೂ ಕೂಡಿದ ಬ್ಯಾಂಕುಗಳೆಂದು ಎರಡು ರೀತಿಯಲ್ಲಿ ವಿಂಗಡಿಸಬಹುದು. ಆದರೆ ಇಂದು ಈ ಬ್ಯಾಂಕು ಗಳಲ್ಲಿ ವ್ಯಕ್ತಿ ಸದಸ್ಯತ್ವವನ್ನು ತಗ್ಗಿಸಲಾಗುತ್ತಿದೆಯಲ್ಲದೇ, ಹೊಸ ದಾಗಿ ವ್ಯಕ್ತಿ ಸದಸ್ಯರನ್ನು ಸೇರಿಸಿಕೊಳ್ಳಲಾಗುವುದಿಲ್ಲ.

ಜಿಲ್ಲಾ ಕೇಂದ್ರೀಯ ಬ್ಯಾಂಕುಗಳ ಮುಖ್ಯ ಕರ್ತವ್ಯವೆಂದರೆ ತನ್ನ ಸದಸ್ಯ ಸಹಕಾರ ಸಂಘಗಳಿಗೆ, ಪ್ರಾಥಮಿಕ ಬೇಸಾಯ ಸಹಕಾರ ಸಂಘ ಗಳಿಗೆ ಹಾಗೂ ಇತರ ಸಹಕಾರ ಸಂಘಗಳಿಗೆ ಅಲ್ಪಾವಧಿ ಹಾಗೂ ಮಧ್ಯಮಾವಧಿ ಸಾಲ ಒದಗಿಸುವುದು, ಅವುಗಳ ಹೆಚ್ಚುವರಿ ಹಣ ವನ್ನು ಠೇವಣಿ ರೂಪದಲ್ಲಿ ಪಡೆದು ಹಣಕಾಸು ಕೊರತೆಯಿದ್ದ ಸಹಕಾರಿ ಸಂಘಗಳಿಗೆ ಸಾಲವಾಗಿ ಹಂಚಿ ತನ್ನ ಸದಸ್ಯ ಸಂಘಗಳಲ್ಲಿ ಹಣಕಾಸಿನ ಸಮತೋಲ ಕಾಯುವುದು, ತನ್ನ ಸದಸ್ಯ ಸಂಘಗಳಿಗೆ ಸೂಕ್ತ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆ ಒದಗಿಸುವುದು. ಬ್ಯಾಂಕಿಂಗ್ ವ್ಯವಹಾರ ಕೈಗೊಳ್ಳುವುದು, ಹಾಗೂ ಗ್ರಾಮೀಣ ಮಟ್ಟದಲ್ಲಿ ಬ್ಯಾಂಕಿಂಗ್ ವ್ಯವಹಾರ ಕೈಗೊಳ್ಳುವುದು, ಹಾಗೂ

ಮಲ್ಲಿಕಾರ್ಜುನ ಒಗ್ಗಣ್ಣನವರ, ಪ್ರಾಧ್ಯಾಪಕರು, ಸಹಕಾರಿ ತರಬೇತಿ ಮಹಾವಿದ್ಯಾಲಯ, ಬೆಂಗಳೂರು ೫೬೦ ೦೭೦

ಗ್ರಾಮೀಣ ಮಟ್ಟದಲ್ಲಿ ಬ್ಯಾಂಕಿಂಗ್ ಸೌಲಭ್ಯಗಳನ್ನು ಹೆಚ್ಚಿಸುವುದು ಮತ್ತು ಜಿಲ್ಲೆಯಲ್ಲಿ ಬ್ಯಾಂಕಿಂಗ್ ಸೌಲಭ್ಯಗಳನ್ನು ಹೆಚ್ಚಿಸುವುದು ಮತ್ತು ಜಿಲ್ಲೆಯಲ್ಲಿ ಸಹಕಾರ ಚಳವಳಿ ಬೆಳವಣಿಗೆಗಾಗಿ ಪ್ರಯತ್ನಿಸುವುದು. 1976ರಿಂದ ವಾಣಿಜ್ಯ ಬ್ಯಾಂಕುಗಳಂತೆ ಈ ಬ್ಯಾಂಕುಗಳು ಸಹ ರೈತ ಸೇವಾ ಸಹಕಾರ ಸಂಘಗಳನ್ನು ತೆರೆಯುತ್ತಿವೆ.

ಈ ಬ್ಯಾಂಕುಗಳು ಸದಸ್ಯರಿಂದ ಹಾಗೂ ಸರ್ಕಾರದಿಂದ ಷೇರು ಬಂಡವಾಳ ಪಡೆಯುವ ಮೂಲಕ, ಸಾರ್ವಜನಿಕರಿಂದ, ಸಹಕಾರ ಸಂಘಗಳಿಂದ ಹಾಗೂ ಇತರ ಸಂಸ್ಥೆಗಳಿಂದ ಠೇವಣಿ ಪಡೆಯುವ ಮೂಲಕ, ತಮ್ಮ ಲಾಭಗಳಿಂದ ಕೂಡಿಟ್ಟ ನಿಧಿಗಳ ಹಣದಿಂದ ಹಾಗೂ ಅಪೆಕ್ಸ್ ಬ್ಯಾಂಕು ಮತ್ತು ನಬಾರ್ಡ್‌ಗಳಿಂದ ಅಲ್ಪಾವಧಿ ಹಾಗೂ ಮಧ್ಯಮಾವಧಿ ಸಾಲ ಮತ್ತು ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಇತರ ವಾಣಿಜ್ಯ ಬ್ಯಾಂಕುಗಳಿಂದ ತಾತ್ಕಾಲಿಕ ಸಾಲ ಪಡೆಯುವ ಮೂಲಕ ತಮ್ಮ ಸಂಪನ್ಮೂಲಗಳನ್ನು ಹೆಚ್ಚಿಸಿಕೊಂಡು ಸಾಲ ಒದಗಿಸುತ್ತಿವೆ.

### ಪ್ರಗತಿ

ಭಾರತದಲ್ಲಿ ಈ ಬ್ಯಾಂಕುಗಳ ಪ್ರಗತಿಯನ್ನು ಕೋಷ್ಟಕ ೧ರಲ್ಲಿ ಕಾಣಬಹುದು :

**ಕೋಷ್ಟಕ 1**

**ಭಾರತದಲ್ಲಿ ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳ ಪ್ರಗತಿ : 30-6-1981 (ಕೋಟಿ ರೂ.ಗಳಲ್ಲಿ)**

| | ವಿವರ | 1978-79 | 1979-80 | 1980-81 |
|---|---|---|---|---|
| 1 | ಒಟ್ಟು ಬ್ಯಾಂಕುಗಳು | 338 | 337 | 337 |
| 2 | ಸ್ವಂತ ಬಂಡವಾಳ | 546 | 602 | 652 |
| 3 | ದುಡಿಯುವ ಬಂಡವಾಳ | 3,376 | 3,870 | 4,681 |
| 4 | ಠೇವಣಿ ಹಣ | 1,669 | 1,978 | 2,461 |
| 5 | ಹಂಚಿದ ಸಾಲ | 2,432 | 2,695 | 3,216 |
| 6 | ವಸೂಲಿ ಮಾಡಲು ಬಾಕಿ ಇದ್ದ ಸಾಲ | 2,328 | 2,617 | 2,956 |
| 7 | ಸುಸ್ತಿ ಸಾಲ | 835 | 969 | 937 |
| 8 | ಸುಸ್ತಿ ಸಾಲದ ಶೇಕಡವಾರು | 35.8% | 37.03% | 31.70% |

ಕೋಷ್ಟಕ ೧ರ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ, 30-6-1981ರಲ್ಲಿ ಈ ಬ್ಯಾಂಕುಗಳ ಸರಾಸರಿ ತಲಾ ಸ್ವಂತ ಬಂಡವಾಳ ರೂ. 1.93 ಕೋಟಿ ಆಗಿದ್ದರೆ, ದುಡಿಯುವ ಬಂಡವಾಳ ರೂ. 13.90 ಕೋಟಿ, ಠೇವಣಿ ಹಣ ರೂ. 7.30 ಕೋಟಿ ಆಗಿದ್ದುವು. ಹಂಚಿದ ಸಾಲ ಸರಾಸರಿ ರೂ. 9.54 ಕೋಟಿ, ವಸೂಲಿ ಮಾಡಲು ಬಾಕಿ ಇದ್ದ ಸಾಲ ಹಾಗೂ ಸುಸ್ತಿ ಸಾಲ ಅನುಕ್ರಮವಾಗಿ ರೂ. 8.7 ಕೋಟಿ ಹಾಗೂ ರೂ. 2.78 ಕೋಟಿ.

### ದೋಷಗಳು

ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕುಗಳು ಇಂದು ಗ್ರಾಮಾಭಿವೃದ್ಧಿಗಾಗಿ ಅಪಾರ ಸೇವೆ ಸಲ್ಲಿಸುತ್ತಿದ್ದರೂ, ಅವುಗಳು ಅನೇಕ ರೀತಿಯ ದೋಷಗಳಿಂದ ಮುಕ್ತವಾಗಿಲ್ಲ. ಅಲ್ಲದೇ ಅವುಗಳ ಪ್ರಗತಿ ಕೇವಲ ಮಹಾರಾಷ್ಟ್ರ, ಗುಜರಾತ್, ಕರ್ನಾಟಕ, ತಮಿಳು ನಾಡು, ಕೇರಳ, ಆಂಧ್ರಪ್ರದೇಶ, ಪಂಜಾಬ್, ಹರಿಯಾಣದಲ್ಲಿ ಮಾತ್ರ ಯಶಸ್ವಿಯಾಗಿ ಬೆಳೆದುಬಂದಿದ್ದು, ಉಳಿದ ರಾಜ್ಯಗಳಲ್ಲಿ ಇವುಗಳ ಪ್ರಗತಿ ಇನ್ನೂ ಶೈಶಾವಸ್ಥೆಯಲ್ಲಿದೆ ಎಂಬುದನ್ನು ಕೋಷ್ಟಕ ೨ರಲ್ಲಿ ಕಾಣಬಹುದು : (ಪುಟ 23ನ್ನು ನೋಡಿ)

ಕೋಷ್ಟಕ ೨ರಿಂದ ತಿಳಿಯುವುದೇನೆಂದರೆ ಭಾರತದ ಇಂಥ ಒಟ್ಟು ಬ್ಯಾಂಕುಗಳಲ್ಲಿ ಕರ್ನಾಟಕದ ಜನಸಂಖ್ಯೆ ಅಂದರೆ ಶೇಕಡ 5.64ರಷ್ಟು 1981ರಲ್ಲಿ ರಾಷ್ಟ್ರದ ಎಲ್ಲ ಕೇಂದ್ರೀಯ ಬ್ಯಾಂಕುಗಳ ಸ್ವಂತಬಂಡವಾಳದಲ್ಲಿ ಶೇಕಡ 5.57ರಷ್ಟು, ಠೇವಣಿ ಹಣದಲ್ಲಿ ಶೇ 5.63ರಷ್ಟು ಪಾಲು ಹೊಂದಿದ್ದರೂ ಒಟ್ಟು ಹಂಚಿದ ಸಾಲದಲ್ಲಿ ಕರ್ನಾಟಕದ ಪಾಲು ಕೇವಲ ಶೇ 2.33ರಷ್ಟು.

ಇತರ ಮುಂದುವರಿದ ರಾಜ್ಯಗಳಂತೆ ಕರ್ನಾಟಕದಲ್ಲಿ ಈ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಕೆಲವೊಂದು ದೋಷಗಳಿಂದ ಕೂಡಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ.

### ಅಶಕ್ತ ಬ್ಯಾಂಕುಗಳು

ಈ ಬ್ಯಾಂಕುಗಳು 1912ರಲ್ಲಿ ಜಾರಿಯಲ್ಲಿ ಬಂದಿದ್ದರೂ ಆರ್ಥಿಕವಾಗಿ ಭದ್ರಬುನಾದಿಯ ಮೇಲೆ ಇನ್ನೂ ಕೆಲವು ಬ್ಯಾಂಕುಗಳು ಬೆಳೆದು ಬಂದಿಲ್ಲ. ಆಂತರಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಂಡು ವೈಜ್ಞಾನಿಕವಾಗಿ ಆಡಳಿತ ಪದ್ಧತಿಯನ್ನು ಹೊಂದಿ, ಹಂಚಿದ ಸಾಲವನ್ನು ಹೆಚ್ಚು ಪ್ರಮಾಣದಲ್ಲಿ ವಸೂಲಿ ಮಾಡಿ ಲಾಭಪ್ರದವಾಗಿ ನಡೆಯುವ ಚೈತನ್ಯವನ್ನು ಅನೇಕ ಬ್ಯಾಂಕುಗಳು ಇನ್ನೂ ಹೊಂದಿಲ್ಲ. 1981ರ ಜೂನ್ 30ರಲ್ಲಿ ರಾಷ್ಟ್ರದಲ್ಲಿಯ ಒಟ್ಟು 337 ಬ್ಯಾಂಕುಗಳಲ್ಲಿ 122 ಬ್ಯಾಂಕುಗಳು, ಅಂದರೆ ಸುಮಾರು ಶೇಕಡ 35ರಷ್ಟು ಬ್ಯಾಂಕುಗಳು, ಅಶಕ್ತ ಬ್ಯಾಂಕುಗಳೆಂದು ರಿಸರ್ವ್ ಬ್ಯಾಂಕಿನಿಂದ ಪರಿಗಣಿತವಾಗಿವೆ. ಕರ್ನಾಟಕದ ಒಟ್ಟು 19 ಬ್ಯಾಂಕುಗಳಲ್ಲಿ 11 ಬ್ಯಾಂಕುಗಳು ಅಶಕ್ತ ಬ್ಯಾಂಕುಗಳಾಗಿದ್ದುವು. ರಿಸರ್ವ್ ಬ್ಯಾಂಕಿನ ಪ್ರಕಾರ ಅಶಕ್ತ ಬ್ಯಾಂಕುಗಳೆಂದರೆ, ಯಾವ ಬ್ಯಾಂಕಿನಲ್ಲಿ ಒಟ್ಟು ವಸೂಲಿ

## ಕೋಷ್ಟಕ 2

### ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳ ಆರ್ಥಿಕ ಸ್ಥಿತಿಗತಿ 30–6–1979 (ರೂ. ಲಕ್ಷಗಳಲ್ಲಿ)

| ರಾಜ್ಯ | ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು | ಶಾಖೆಗಳು | ಷೇರು ಬಂಡವಾಳ | ಠೇವಣಿಗಳು | ದುಡಿಯುವ ಬಂಡವಾಳ | ಸಾಲಗಳು | | | |
|---|---|---|---|---|---|---|---|---|---|
| 1 ಮಹಾರಾಷ್ಟ್ರ | 26 | 1524 | 40.22 | 382.72 | 604.15 | 562.84 | 151.76 | 404.97 | 54.07 |
| 2 ಗುಜರಾತ್ | 18 | 717 | 36.72 | 289.32 | 479.18 | 316.19 | 185.35 | 326.36 | 91.45 |
| 3 ಪಂಜಾಬ್ | 17 | 542 | 18.61 | 118.13 | 187.72 | 172.86 | 128.44 | 88.40 | 42.34 |
| 4 ತಮಿಳು ನಾಡು | 16 | 372 | 34.24 | 158.68 | 415.74 | 305.63 | 189.90 | 328.12 | 90.23 |
| 5 ಕರ್ನಾಟಕ | 19 | 472 | 22.76 | 91.74 | 186.41 | 130.23 | 68.28 | 141.92 | 37.30 |
| 6 ಕೇರಳ | 11 | 215 | 12.37 | 94.63 | 144.03 | 107.83 | 54.65 | 90.90 | 12.17 |
| 7 ಆಂಧ್ರಪ್ರದೇಶ | 26 | 327 | 29.81 | 65.07 | 230.87 | 133.59 | 94.58 | 78.21 | 68.86 |
| 8 1ರಿಂದ 7ರ ಒಟ್ಟು | 133 | 4,169 | 194.73 | 1,200.29 | 2,248.04 | 1,729.17 | 873.78 | 1,858.38 | 496.12 |
| 9 ರಾಷ್ಟ್ರಮಟ್ಟದಲ್ಲಿ | 338 | 6,890 | 317.58 | 1,668.65 | 3,376.34 | 2,432.76 | 1,391.41 | 2,313.11 | 835.82 |
| 10 ಕಾಲಂ 8 ಮತ್ತು 9ರ ಶೇಕಡ | 39.35 | 60.51 | 64.40 | 71.93 | 66.58 | 71.09 | 71.09 | 66.37 | 59.41 |

ಯಾಗದ ಸಾಲ ಮತ್ತು ವಸೂಲಿ ಆಗಲು ಸಂಶಯವಿದ್ದ ಸಾಲ, ಮೂರು ವರ್ಷಕ್ಕಿಂತ ಹೆಚ್ಚಿನ ಅವಧಿಯ ಸುಸ್ತಿ ಸಾಲ ಹಾಗೂ ಕೂಡಿಬಂದ ನಷ್ಟ (ಅಕ್ಯುಮ್ಯುಲೇಟೆಡ್ ಲಾಸ್) ಕೂಡಿ ಆ ಬ್ಯಾಂಕಿನ ಒಟ್ಟು ಸ್ವಂತ ಬಂಡವಾಳದ ಶೇಕಡ 50ಕ್ಕಿಂತ ಹೆಚ್ಚಾದರೆ ಅಂಥ ಬ್ಯಾಂಕು ಅಶಕ್ತ ಬ್ಯಾಂಕು. ಕರ್ನಾಟಕದಲ್ಲಿಯ ಅಶಕ್ತ ಬ್ಯಾಂಕುಗಳ ಸ್ಥಿತಿಗತಿಯನ್ನು ಕೋಷ್ಟಕ ೩ರಿಂದ ಕಾಣಬಹುದು.

## ಕೋಷ್ಟಕ 3

### 30–6–1982ರಲ್ಲಿ ಅಶಕ್ತ ಬ್ಯಾಂಕುಗಳ ಸ್ಥಿತಿಗತಿ (ಲಕ್ಷ ರೂ.ಗಳಲ್ಲಿ)

| ಬ್ಯಾಂಕುಗಳು | ವಸೂಲಿ ಆಗದ ಮತ್ತು ವಸೂಲಿ ಸಂಶಯಾಸ್ಪದ ಸಾಲ | 3 ವರ್ಷಕ್ಕಿಂತ ಪೂರ್ವದಲ್ಲಿರುವ ಸಾಲಗಳು | ಕೂಡಿಬಂದ ನಷ್ಟಗಳು | ಕಾಲಂ 1, 2, 3ರ ಮೊತ್ತ | ಸ್ವಂತ ಬಂಡವಾಳದ ಶೇಕಡ 50ರಷ್ಟು | ಕೊರತೆ |
|---|---|---|---|---|---|---|
| ಬೆಂಗಳೂರು | 80.76 | 58.93 | — | 139.69 | 75.81 | 63.88 |
| ಕೋಲಾರ | 48.41 | 73.11 | 6.84 | 128.36 | 63.13 | 65.23 |
| ಚಿತ್ರದುರ್ಗ | 121.41 | 50.95 | 37.00 | 209.35 | 67.10 | 142.25 |
| ಶಿವಮೊಗ್ಗ | 24.63 | 303.90 | 55.75 | 384.28 | 107.19 | 277.09 |
| ತುಮಕೂರು | 22.32 | 100.39 | — | 122.71 | 67.79 | 54.92 |
| ಹಾಸನ | — | 229.91 | 1.11 | 31.02 | 72.13 | 158.89 |
| ಬಿಜಾಪುರ | 104.27 | 243.68 | — | 47.95 | 182.29 | 165.66 |
| ಧಾರವಾಡ | 68.32 | 70.10 | — | 138.42 | 141.87 | 3.45 |
| ಗುಲ್ಬರ್ಗಾ | 111.98 | 95.85 | 35.56 | 243.39 | 65.97 | 177.42 |
| ರಾಯಚೂರು | 143.44 | 70.23 | 17.39 | 23 .06 | 83.61 | 147.45 |
| ಬಳ್ಳಾರಿ | 109.58 | 12.30 | 12.30 | 161.29 | 64.04 | 97.25 |
| | 835.11 | 1,336.46 | 165.95 | 2,337.52 | 990.93 | 1,346.59 |

ಕೋಷ್ಟಕ 3ರಿಂದ ತಿಳಿಯುವುದೇನೆಂದರೆ ಮೇಲೆ ತಿಳಿಸಿರುವ ಎಲ್ಲ ಬ್ಯಾಂಕುಗಳಿಗಿಂತ, ಶಿವಮೊಗ್ಗ ಬ್ಯಾಂಕಿನಲ್ಲಿ ಮೂರು ವರ್ಷಕ್ಕಿಂತ ಪೂರ್ವದಲ್ಲಿದ್ದ ಸಾಲ ಮತ್ತು ಕೂಡಿಬಂದ ನಷ್ಟ ಅಧಿಕವಾಗಿರುವುದು ಕಂಡುಬರುತ್ತದೆ. ಅದರಂತೆ ಧಾರವಾಡ ಮತ್ತು ಬಿಜಾಪುರ ಬ್ಯಾಂಕುಗಳು ಸಹ ಅಶಕ್ತ ಬ್ಯಾಂಕುಗಳಾಗಿ ಮುಂದುವರಿಯುತ್ತಿರುವುದು ಅತ್ಯಂತ ಶೋಚನೀಯ.

**ಸುಸ್ತಿ ಸಾಲ**

ಕೃಷಿ ಸಾಲ ನೀಡುವ ಯಾವುವೇ ಸಂಸ್ಥೆಗಳಿಗೆ ಬೇಗನೆ ವಾಸಿಯಾಗದ ರೋಗವೆಂದರೆ ಸುಸ್ತಿ ಸಾಲ. 1981ರಲ್ಲಿ ಒಟ್ಟು ಬರಬೇಕಾದ ಸಾಲದಲ್ಲಿ ಸುಸ್ತಿ ಸಾಲದ ಪ್ರಮಾಣ ರಾಷ್ಟ್ರಮಟ್ಟದಲ್ಲಿ ಶೇಕಡ 32ರಷ್ಟು ಆಗಿತ್ತು. ಕರ್ನಾಟಕದಲ್ಲಿ ಒಟ್ಟು ಬರಬೇಕಾದ ಸಾಲದಲ್ಲಿ ಸುಸ್ತಿ ಸಾಲದ ಪ್ರಮಾಣ ಶೇಕಡ 57ರಷ್ಟು ಆಗಿತ್ತು. ಆದರೆ ಕೆಲವೊಂದು ಬ್ಯಾಂಕುಗಳ ಮಟ್ಟದಲ್ಲಿ ಹೇಳಬಹುದಾದರೆ ಇದು ಶೇಕಡ 80ಕ್ಕಿಂತಲೂ ಮೀರಿದೆ.

ಕರ್ನಾಟಕದಲ್ಲಿ 1982ರ ಜೂನ್ ಅಂತ್ಯದಲ್ಲಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳನ್ನು ಅವುಗಳ ಸುಸ್ತಿ ಸಾಲದ ಶೇಕಡಾವಾರು ಮೇರೆಗೆ ನಾಲ್ಕು ವಿಧವಾಗಿ ಕೋಷ್ಟಕ 4ರಲ್ಲಿ ಕಾಣಿಸಿರುವಂತೆ ವಿಂಗಡಿಸಬಹುದು.

**ಕೋಷ್ಟಕ 4**

| ವಿಧಗಳು | ಸುಸ್ತಿ ಸಾಲದ ಶೇಕಡಕ್ಕಿಂತ ಕಡಿಮೆ | | ಬ್ಯಾಂಕಿನ ಹೆಸರು | | % |
|---|---|---|---|---|---|
| A | 20%ಕ್ಕಿಂತ ಕಡಿಮೆ | 1 | ಡಿ.ಸಿ.ಸಿ. ಬ್ಯಾಂಕು | ಮಂಡ್ಯ | 19.32 |
| B | 20%ನಿಂದ 40% | 2 | ” | ಮಂಗಳೂರು | 21.57 |
| | | 3 | ” | ಕೊಡಗು | 24.20 |
| | | 4 | ” | ಬೆಂಗಳೂರು | 29.02 |
| | | 5 | ” | ಉತ್ತರ ಕನ್ನಡ | 31.21 |
| | | 6 | ” | ಬಿಜಾಪುರ | 31.56 |
| | | 7 | ” | ಬೀದರ್ | 35.68 |
| | | 8 | ” | ಬೆಳಗಾಂವಿ | 38.84 |
| C | ಶೇ. 40ರಿಂದ 60 | 9 | ” | ಬಳ್ಳಾರಿ | 42.69 |
| | | 10 | ” | ಧಾರವಾಡ | 49.65 |
| | | 11 | ” | ಮೈಸೂರು | 52.95 |
| | | 12 | ” | ತುಮಕೂರು | 56.39 |
| D | ಶೇ. 60ಕ್ಕಿಂತ ಹೆಚ್ಚು | 13 | ” | ರಾಯಚೂರು | 65.44 |
| | | 14 | ” | ಚಿಕ್ಕಮಗಳೂರು | 66.90 |
| | | 15 | ” | ಚಿತ್ರದುರ್ಗ | 69.33 |
| | | 16 | ” | ಕೋಲಾರ | 77.92 |
| | | 17 | ” | ಗುಲ್ಬರ್ಗ | 79.30 |
| | | 18 | ” | ಹಾಸನ | 92.50 |
| | | 19 | ” | ಶಿವಮೊಗ್ಗ | 93.09 |

ಶಿವಮೊಗ್ಗ ಮತ್ತು ಹಾಸನ ಜಿಲ್ಲಾ ಬ್ಯಾಂಕಿನ ಸುಸ್ತಿ ಸಾಲದ ಪ್ರಮಾಣ ಅನುಕ್ರಮವಾಗಿ 93% ಮತ್ತು 92.5% ಆಗಿತ್ತು. ಇದರಿಂದ ಸುಸ್ತಿ ಸಾಲದ ಪ್ರಮಾಣ ಎಷ್ಟು ಅಪಾಯಕಾರಿಯಾಗಿ ಬೆಳೆದಿದೆ ಎಂಬುದು ಸಹಜವಾಗಿ ಗೋಚರಿಸುತ್ತದೆ.

ಸುಸ್ತಿ ಸಾಲದ ಸಮಸ್ಯೆ ಕೇವಲ ಸಹಕಾರಿ ಬ್ಯಾಂಕುಗಳಿಗೆ ಆವರಿಸಿಲ್ಲ. ವಾಣಿಜ್ಯ ಬ್ಯಾಂಕುಗಳ ಸಾಲದ ವಸೂಲಿ ಪ್ರಮಾಣ ಶೇ. 50ಕ್ಕಿಂತ ಹೆಚ್ಚಿಲ್ಲ. ಸುಸ್ತಿ ಸಾಲದ ಸಮಸ್ಯೆಯನ್ನು ತಗ್ಗಿಸಲು ರಿಸರ್ವ್ ಬ್ಯಾಂಕ್ ಹಾಗೂ ರಾಜ್ಯ ಸರಕಾರಗಳು ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದ್ದರೂ ಕರ್ನಾಟಕದಲ್ಲಿ ಜನತಾ ಸರಕಾರ ರಾಷ್ಟ್ರದಲ್ಲಿಯೇ ಪ್ರಪ್ರಥಮವಾಗಿ ಸಮಸ್ತ ಸುಸ್ತಿ ಸಾಲವನ್ನು ಬಡ್ಡಿರಹಿತವಾಗಿ ವಸೂಲಿ ಮಾಡುವ ಹಾಗೂ ಮಾರಾಟ ಸಹಕಾರ ಸಂಘಗಳ ಮೂಲಕ ವಾಪಸ್ಸು ಕೊಡುವ ಸಾಲಕ್ಕೆ ಶೇ. 5ರಷ್ಟು ಬಡ್ಡಿಯಲ್ಲಿ ರಿಯಾಯಿತಿ ಕೊಡುವ ಯೋಜನೆಯಿಂದ ಸುಸ್ತಿ ಸಾಲದ ಸಮಸ್ಯೆ ಬಹುಮಟ್ಟಿಗೆ ತಗ್ಗಿದೆ ಎನ್ನಬಹುದು. ಆದರೆ ಸುಸ್ತಿ ಸಾಲದ ಸಮಸ್ಯೆಯಾವುದೇ ಒಂದು ವರುಷದ ಸಮಸ್ಯೆಯಲ್ಲ. ಭೂ-ಅಭಿವೃದ್ಧಿಗಾಗಿ ರೈತರಿಗೆ ಸಾಲ ಬೇಕೇಬೇಕು. ಸಾಲ ಕೊಟ್ಟರೆ ಸುಸ್ತಿಸಾಲದ ಸಮಸ್ಯೆಯನ್ನು ಎದುರಿಸಲೇಬೇಕು. ಆದರೆ ಸುಸ್ತಿ ಸಾಲದ ಸಮಸ್ಯೆ ಬರದಂತೆ ಮುಂಜಾಗ್ರತೆ ಕೈಗೊಳ್ಳುವುದು ಅತ್ಯವಶ್ಯ.

## ಕೋಷ್ಟಕ 5

## ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಲಿ., ಬೆಂಗಳೂರು

ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಲ್ಲಿ ಒಟ್ಟು ಬೇಡಿಕೆ ಸಾಲ, ವಸೂಲಾದ ಸಾಲ ಹಾಗೂ ಬರಬೇಕಾದ ಸಾಲಗಳ ತಃಖ್ತೆ
(ಲಕ್ಷ ರೂ.ಗಳಲ್ಲಿ)

| ಸಂ. | ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳ ಹೆಸರುಗಳು | ಬೇಡಿಕೆ ಸಾಲ | ವಸೂಲಾದ ಸಾಲ | ಒಟು ಬಾಕಿ ಸಾಲ | ವಸೂಲಿ ಶೇಕಡ ಪ್ರಮಾಣ |
|---|---|---|---|---|---|
| 1 | ಬೆಂಗಳೂರು | 394.64 | 248.33 | 146.31 | 62.93 |
| 2 | ಕೋಲಾರ | 294.32 | 91.06 | 203.26 | 30.94 |
| 3 | ಚಿತ್ರದುರ್ಗ | 466.46 | 200.48 | 265.98 | 42.98 |
| 4 | ಶಿವಮೊಗ್ಗ | 842 55 | 98.88 | 743.67 | 11.74 |
| 5 | ತುಮಕೂರು | 396.73 | 171.43 | 225.30 | 43.21 |
| | | 2,394.73 | 810.18 | 1,584.52 | 33.83 |
| 6 | ಮೈಸೂರು | 538.78 | 219.41 | 319.37 | 40.72 |
| 7 | ಮಂಡ್ಯ | 1,050.36 | 817.51 | 232.85 | 77.83 |
| 8 | ಹಾಸನ | 424.69 | 93.02 | 331.67 | 21.90 |
| 9 | ಮಂಗಳೂರು (ದಕ್ಷಿಣ ಕನ್ನಡ) | 642.55 | 490.44 | 152.11 | 76.33 |
| 10 | ಕೊಡಗು | 668.72 | 537.95 | 130.77 | 80.44 |
| 11 | ಚಿಕ್ಕಮಗಳೂರು | 574.09 | 270.41 | 303.68 | 47.10 |
| | | 3,899.19 | 2,428.74 | 1,470.45 | 62.29 |
| 12 | ಬೆಳಗಾಂವಿ | 1,507.29 | 1,005.19 | 502.10 | 66.69 |
| 13 | ಬಿಜಾಪುರ | 1,498.90 | 732.82 | 766.08 | 48.89 |
| 14 | ಧಾರವಾಡ | 1,721.80 | 793.71 | 928.00 | 46.10 |
| 15 | ಉತ್ತರ ಕನ್ನಡ (ಕಾರವಾರ) | 566.44 | 396.44 | 170.00 | 69.99 |
| | | 5,294.43 | 2,928.16 | 2,366.27 | 55.31 |
| 16 | ಗುಲ್ಬರ್ಗ | 303.20 | 63.37 | 239.83 | 20.90 |
| 17 | ಬೀದರ್ | 765.56 | 467.17 | 298.39 | 61.02 |
| 18 | ರಾಯಚೂರು | 394.45 | 170.22 | 224.23 | 43.15 |
| 19 | ಬಳ್ಳಾರಿ | 481.12 | 257.37 | 223.37 | 53.49 |
| | | 1,944.33 | 958.13 | 986.20 | 49.28 |
| | | 1,3532.65 | 7,125.21 | 6,407.44 | 52.65 |

ಆಧಾರ: ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನೀಡಿದ ವಿವರಗಳು.

## ಕೋಷ್ಟಕ 6

### ಕರ್ನಾಟಕ ರಾಜ್ಯದ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಹಂಚಿದ ಸಾಲ, ಬಾಕಿ ಇರುವ ಸಾಲ ಮತ್ತು ಮುದ್ದತು ಮೀರಿದ ಸಾಲ (30-6-1982ರಂದು ಇದ್ದಂತೆ) (ಲಕ್ಷ ರೂ.)

| ಸಂ. | ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು | ಕೊಟ್ಟ ಒಟ್ಟು ಸಾಲ ಕೃಷಿ+ಕೃಷೀತರ | ಬರತಕ್ಕ ಒಟ್ಟು ಬಾಕಿ | ಮುದ್ದತು ಮೀರಿದ ಸಾಲ | ವಸೂಲಿ ಬರತಕ್ಕ ಸಾಲಕ್ಕೆ ಮುದ್ದತು ಮೀರಿದ ಸಾಲದ ಶೇಕಡಾವಾರು |
|---|---|---|---|---|---|
| 1 | ಬೆಂಗಳೂರು | 859.41 | 504.21 | 146.31 | 29.02 |
| 2 | ಕೋಲಾರ | 357.80 | 260.87 | 203.26 | 77.92 |
| 3 | ಚಿತ್ರದುರ್ಗ | 635.67 | 383.64 | 265.98 | 69.33 |
| 4 | ಶಿವಮೊಗ್ಗ | 285.15 | 798.85 | 743.67 | 93.09 |
| 5 | ತುಮಕೂರು | 201.37 | 399.54 | 225.30 | 56.39 |
| | | 2,339.40 | 2,347.07 | 1,584.52 | 67.51 |
| 6 | ಮೈಸೂರು | 1,028.24 | 602.78 | 319.37 | 52.95 |
| 7 | ಮಂಡ್ಯ | 2,106.82 | 1,205.46 | 232.85 | 19.32 |
| 8 | ಹಾಸನ | 167.92 | 358.56 | 331.67 | 92.50 |
| 9 | ದಕ್ಷಿಣ ಕನ್ನಡ | 1,086.67 | 705.13 | 152.11 | 21.57 |
| 10 | ಕೊಡಗು | 887.44 | 540.27 | 130.77 | 24.20 |
| 11 | ಚಿಕ್ಕಮಂಗಳೂರು | 517.80 | 453.94 | 303.68 | 66.90 |
| | | 5,794.89 | 3,866.14 | 1,470.45 | 38.03 |
| 12 | ಬೆಳಗಾವಿ | 4,197.35 | 1,291.27 | 502.10 | 38.84 |
| 13 | ಬಿಜಾಪುರ | 1,165.35 | 2,431.63 | 766.08 | 31.54 |
| 14 | ಧಾರವಾಡ | 2,067.77 | 1,876.75 | 928.09 | 49.45 |
| 15 | ಉತ್ತರ ಕನ್ನಡ | 2,405.41 | 544.68 | 170.00 | 31.21 |
| | | 9,835.88 | 6,144.33 | 2,366.27 | 38.51 |
| 16 | ಗುಲ್ಬರ್ಗ | 73.71 | 302.43 | 239.83 | 79.30 |
| 17 | ಬಿದರ್ | 740.20 | 838.62 | 298.39 | 35.68 |
| 18 | ರಾಯಚೂರು | 324.68 | 342.51 | 224.23 | 65.47 |
| 19 | ಬಳ್ಳಾರಿ | 597.22 | 524.08 | 223.75 | 42.69 |
| | | 1,735.81 | 2,007.64 | 986.20 | 49.12 |
| | | 19,705.98 | 14,365.18 | 6,407.44 | 41.11 |

ಆಧಾರ: ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನೀಡಿರುವ ವಿವರಗಳು

**ಅಶುದ್ಧ ಆಡಳಿತ**

ಅನೇಕ ಬ್ಯಾಂಕುಗಳು ಇನ್ನೂ ಚೇತರಿಸಿಕೊಳ್ಳದೆ ಇರಲು ಪ್ರಬಲ ಕಾರಣವೆಂದರೆ ಅವುಗಳ ಹದಗೆಟ್ಟ ಆಡಳಿತ ಪದ್ಧತಿ, ಯೋಗ್ಯ ಅನುಭವ ಹಾಗೂ ತರಬೇತಿ ಹೊಂದದ ಆಡಳಿತ ವರ್ಗ ಕಾರಣ. ಸಂಘದ ಸರ್ವಾಂಗೀಣ ಪ್ರಗತಿಗೆ ಯೋಗ್ಯ ಪರಿಜ್ಞಾನ, ದೀರ್ಘ ಅನುಭವ ಹೊಂದಿದ ಸ್ವಾರ್ಥರಹಿತ ಆಡಳಿತ ಸಮಿತಿ ಹಾಗೂ ಅವಿರತ ಶ್ರಮಿಸುವ ದೀರ್ಘ ಅನುಭವ ಹೊಂದಿದ ಸಿಬ್ಬಂದಿ ವರ್ಗ ಅಗತ್ಯ. ಇಂದಿನ ಮಾದರಿಯ ವೈಜ್ಞಾನಿಕ ಆಡಳಿತ ಪದ್ಧತಿ ಈ ಬ್ಯಾಂಕುಗಳ ಕಾರ್ಯಾಚರಣೆಯಲ್ಲಿ ಹರಿದು ಬರದೆ ಇರುವುದರಿಂದ ಈ ಬ್ಯಾಂಕುಗಳ ಪ್ರಗತಿ ತೃಪ್ತಿಕರವಾಗಿಲ್ಲ.

**ವಾಣಿಜ್ಯ ಬ್ಯಾಂಕುಗಳೊಡನೆ ಸ್ಪರ್ಧೆ**

ಬೇಸಾಯ ಪತ್ತು ಇಂದು ಕೇವಲ ಸಹಕಾರಿ ಸಂಘದ ಸ್ವತ್ತಾಗಿ ಉಳಿದಿಲ್ಲ. ಕೃಷಿ ಪತ್ತಿನ ಬೇಡಿಕೆಯನ್ನು ಕೇವಲ ಯಾವುದೇ ಒಂದು ರೀತಿಯ ಸಾಂಘಿಕ ವ್ಯವಸ್ಥೆಯಿಂದ ಸಂಪೂರ್ಣವಾಗಿ ಈಡೇರಿಸಲು ಅಸಾಧ್ಯವಾದುದರಿಂದ ಸಹಕಾರಿ ಸಂಘಗಳೊಡನೆ ವಾಣಿಜ್ಯ ಬ್ಯಾಂಕುಗಳು ಮತ್ತು ಹೊಸದಾಗಿ ಜನ್ಮ ತಳೆದ ಗ್ರಾಮೀಣ ಬ್ಯಾಂಕುಗಳು ಕೃಷಿ ಸಾಲ ವಿತರಣೆಯಲ್ಲಿ ತೊಡಗುವುದು ಅವಶ್ಯವಾಯಿತು. ಇದರಿಂದ ಬೇಸಾಯ ಪತ್ತು ವಿತರಣೆಯಲ್ಲಿ, ಗ್ರಾಮೀಣ ಠೇವಣಿ ಸಂಗ್ರಹಣೆಯಲ್ಲಿ ಈ ಮೂರು ಸಂಸ್ಥೆಗಳ ನಡುವೆ ಪ್ರತ್ಯಕ್ಷವಾಗಿ ಸ್ಪರ್ಧೆ ಕಂಡುಬರದಿದ್ದರೂ ಪರೋಕ್ಷವಾಗಿ ಇದು ನಡೆಯುತ್ತಿದೆ. ಬೇಸಾಯ ಪತ್ತನ್ನು ಸಂಪೂರ್ಣವಾಗಿ ಸಹಕಾರಿ ಸಂಘಗಳಿಂದಲೇ ಒದಗಿಸುವುದು ಅಸಾಧ್ಯವಾಗಿದ್ದರೂ ವಾಣಿಜ್ಯ ಬ್ಯಾಂಕುಗಳ ಆಗಮನದಿಂದ ಜಿಲ್ಲಾ ಕೇಂದ್ರೀಯ ಬ್ಯಾಂಕುಗಳ ಪತ್ತಿನ ವ್ಯವಹಾರಕ್ಕೆ ಹೊಡೆತ ಬಿದ್ದಿದೆ ಎಂಬ ಕೂಗು ಕೆಲವು ಭಾಗಗಳಿಂದ ಕೇಳಿಬರುತ್ತಿದೆ. ಕಾರಣ ವಾಣಿಜ್ಯ ಬ್ಯಾಂಕುಗಳು ರೈತರಿಗೆ ನೇರವಾಗಿ ಹಾಗೂ ಸಹಕಾರ ಸಂಘಗಳ ಮೂಲಕ ಪರೋಕ್ಷವಾಗಿ—ಜಿಲ್ಲಾ ಮಧ್ಯವರ್ತಿ ಸಹಕಾರ ಬ್ಯಾಂಕುಗಳು ಸಮರ್ಥವಾಗಿ ಕೆಲಸ ಮಾಡುತ್ತಿದ್ದ ಭಾಗಗಳಲ್ಲಿಯೂ—ಸಾಲ ಕೊಡುತ್ತಿರುವುದು ಕಂಡುಬರುತ್ತಿದೆ. ವಾಣಿಜ್ಯ ಬ್ಯಾಂಕುಗಳು ಹಾಗೂ ಗ್ರಾಮೀಣ ಬ್ಯಾಂಕುಗಳು ಎಲ್ಲಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳು ಅಶಕ್ತವಾಗಿವೆಯೋ, ಎಲ್ಲಿ ರೈತರ ಬೇಡಿಕೆಗಳನ್ನು ಸಂಪೂರ್ಣವಾಗಿ ಈಡೇರಿಸಲು ಸಾಧ್ಯವಿಲ್ಲವೋ, ಅಲ್ಲಿ ಸಾಲವನ್ನೊದಗಿಸಬೇಕು. ನಾಯರ್ ಸಮಿತಿಯ ವರದಿಯ ಪ್ರಕಾರ, ವಾಣಿಜ್ಯ ಬ್ಯಾಂಕುಗಳು ಪ್ರಾಥಮಿಕ ಸಹಕಾರಿ ಸಂಘಗಳ ಮೂಲಕ ನೀಡುವ ಸಾಲ ಪದ್ಧತಿಯಲ್ಲಿ ಅಯಶಸ್ವಿಯಾಗಿವೆಯೆಂದು ಕಂಡುಬಂದಿದೆ.

ಹೀಗೆ ಜಿಲ್ಲಾ ಕೇಂದ್ರೀಯ ಬ್ಯಾಂಕುಗಳು ಗ್ರಾಮೀಣ ಅಭಿವೃದ್ಧಿಗಾಗಿ ಅಪಾರ ಸೇವೆ ಸಲ್ಲಿಸುತ್ತಿದ್ದರೂ ಅವು ಕೆಲವೊಂದು ಅಶಕ್ತತೆಗಳಿಂದ ಮುಕ್ತವಾಗಿಲ್ಲ. ಈ ಅಶಕ್ತತೆಗಳಿಂದ ಮುಕ್ತಿ ಹೊಂದದೆ ಇವು ಚೇತರಿಸಿಕೊಳ್ಳಲಾರವು. ಗ್ರಾಮೀಣ ಅಭಿವೃದ್ಧಿಗಾಗಿ ಯೋಗ್ಯಸಂಸ್ಥೆಗಳಿಂದ ಪ್ರಾಥಮಿಕ ಬೇಸಾಯ ಪತ್ತಿನ ಸಹಕಾರಿ ಸಂಘಗಳಿಗೆ ಸಾಕಷ್ಟು ಸಾಲ ಹಂಚಲು ಹಾಗೂ ಹಂಚಿದ ಸಾಲವನ್ನು ವಸೂಲಿ ಮಾಡಲು, ಅವುಗಳಿಗೆ ಯೋಗ್ಯ ಮಾರ್ಗದರ್ಶನ, ಮೇಲ್ವಿಚಾರಣೆ ಹಾಗೂ ಕಾರ್ಯಕಲಾಪಗಳನ್ನು ಹತೋಟಿಯಲ್ಲಿ ಇಡಲು ಈ ಬ್ಯಾಂಕುಗಳು ಮುಂದುವರಿಯುವುದು ಅತ್ಯಾವಶ್ಯಕವಾಗಿದೆ. ಆದ್ದರಿಂದ ಅಶಕ್ತವಾದ ಈ ಬ್ಯಾಂಕುಗಳ ಪುನರುಜ್ಜೀವನ ಆಗಬೇಕು. ಇವು ಪುನರುಜ್ಜೀವನಗೊಂಡು ಕೃಷಿ ಅಭಿವೃದ್ಧಿಗಾಗಿ ಸಾಕಷ್ಟು ಸಾಲ ಸಲ್ಲಿಸುವಂತಾಗಲಿ. ★

• • •

ರೈತರನ್ನು ಲೇವಾದೇವಿಗಾರರ ಬಿಗಿ ಮುಷ್ಟಿಯಿಂದ ಬಿಡಿಸುವ ಸಲುವಾಗಿ ಸಹಕಾರಿ ಪತ್ತಿನ ಸಂಘಗಳನ್ನು ಆರಂಭಿಸಲಾಯಿತು. ಪಟ್ಟಭದ್ರ ಹಿತಗಳ ಬಿಗಿ ಮುಷ್ಟಿಯಿಂದ ಸಹಕಾರ ಚಳವಳಿಯನ್ನು ಬಿಡಿಸುವುದು ಹೇಗೆಂಬುದು ಈಗಿನ ಸಮಸ್ಯೆ. ಇದರ ಪರಿಹಾರ ಯಾರಿಗೂ ಗೊತ್ತಿಲ್ಲವೆಂದು ಕಾಣುತ್ತದೆ : ಅಭಿವೃದ್ಧಿ ಪ್ರಯತ್ನಗಳಲ್ಲಿ ಜನರು ಹೆಚ್ಚಾಗಿ ಭಾಗವಹಿಸುವಂತೆ ಮಾಡುವ ಸಲುವಾಗಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸ್ಥಾಪಿಸಲಾಯಿತು. ನೌಕರಶಾಹಿಯ ಬಿಗಿ ಮುಷ್ಟಿಯಿಂದ ಅಭಿವೃದ್ಧಿ ಕಲಾಪಗಳನ್ನು ಬಿಡಿಸುವುದು ಇದರ ಹಿಂದಿದ್ದ ಮೂಲಭೂತ ತತ್ವ. ಸ್ಥಳೀಯ ಅಧಿಕಾರಾರೂಢ ರಾಜಕೀಯ ಧುರೀಣರ ಬಿಗಿಮುಷ್ಟಿಯಿಂದ ಸಂಸ್ಥೆಗಳನ್ನು ಹೊರಗಿಡುವುದು ಹೇಗೆಂಬುದು ಈಗಿನ ಸಮಸ್ಯೆ.

—ಪಿ. ಆರ್. ಗಾಯಕವಾಡ್

# ನಬಾರ್ಡ್: ಕಾರ್ಯಸ್ವರೂಪ

ಶಾ. ಅಚ್ಚಣ್ಣ

**ಗ್ರಾಮಪ್ರದೇಶದ ಅರ್ಥವ್ಯವಸ್ಥೆಯನ್ನು ಉತ್ತಮಪಡಿಸಿ ಸಮಗ್ರ ಅಭಿವೃದ್ಧಿ ಸಾಧಿಸಲು ನೆರವಾಗುವ ಉದ್ದೇಶ ಹೊಂದಿದ ಶೃಂಗಸಂಸ್ಥೆಯಾದ ರಾಷ್ಟ್ರೀಯ ಕೃಷಿ ಮತ್ತು ಗ್ರಾಮಾಭಿವೃದ್ಧಿ ಬ್ಯಾಂಕನ್ನು ಕುರಿತ ವಿವೇಚನೆ**

ಗ್ರಾಮಪ್ರದೇಶದ ಸರ್ವಾಂಗೀಣ ಪ್ರಗತಿ ಸಾಧ್ಯವಾಗಬೇಕಾದರೆ ಕೃಷಿಯ ಜೊತೆಗೆ ಕೃಷೀತರ ಚಟುವಟಿಕೆಗಳೂ ಸಮಸಮನಾಗಿ ಅಭಿವೃದ್ಧಿ ಹೊಂದುವುದು ಅತ್ಯಗತ್ಯ. ಕೃಷಿ ಹಾಗೂ ಗ್ರಾಮಾಭಿವೃದ್ಧಿಗಾಗಿ ಸ್ಥಾಪಿತವಾದ ಶೃಂಗ ಅಭಿವೃದ್ಧಿ ಬ್ಯಾಂಕ್ ಆದ ನಬಾರ್ಡ್ ಈ ಅಭಿವೃದ್ಧಿಗೆ ಚಾಲನೆ ನೀಡಬೇಕು. ಈ ಕೆಲಸವನ್ನು ಅದು ಹಮ್ಮಿಕೊಂಡಿದೆ. ಒಂದು ದೇಶ ಅಥವಾ ರಾಷ್ಟ್ರ ಮುಂದೆ ಬರಲು ದೇಶದ ವಾಯುಗುಣಕ್ಕೆ ತಕ್ಕಂತೆ ಕಚ್ಚಾ ಸಾಮಗ್ರಿಗಳ ಉತ್ಪಾದನೆ ಬಹು ಮುಖ್ಯವಾಗಿ ಆಗಬೇಕು; ಹಾಗೂ ಅದನ್ನು ತಯಾರಿಸುವವರು ಬಡತನದ ರೇಖೆಯನ್ನು ದಾಟಿ ಮೇಲೇರಬೇಕು. ಈ ರೀತಿ ಹೆಚ್ಚುಹೆಚ್ಚಾಗಿ ಕಚ್ಚಾ ಸಾಮಗ್ರಿಗಳು ಉತ್ಪಾದನೆಯಾಗಲು ಬಹುಮುಖ್ಯವಾಗಿ ಆರ್ಥಿಕ ಸಹಾಯ ಬಹುಮುಖ್ಯವಾದ್ದು. ಸಹಕಾರಕ್ಷೇತ್ರದಲ್ಲಿ 1915 ಮತ್ತು 1921ರಿಂದ ಅಪೆಕ್ಸ್ ಬ್ಯಾಂಕು ಮತ್ತು ಭೂ ಬ್ಯಾಂಕುಗಳು ಕೇವಲ ವ್ಯವಸಾಯ ಕ್ಷೇತ್ರಕ್ಕೆ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲವನ್ನು ಕೊಡಲಾರಂಭಿಸಿದುವು. ಕೇಂದ್ರ ಸರ್ಕಾರ 1969ರಲ್ಲಿ 14 ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿ ಗ್ರಾಮೀಣ ಜನತೆಗೆ ಕೃಷೀತರ ಚಟುವಟಿಕೆಗಳಿಗೂ, ಸಣ್ಣಪುಟ್ಟ ಕೈಗಾರಿಕೆಗಳ ಅಭಿವೃದ್ಧಿಗೂ, ಸಣ್ಣ ಮಾರಾಟ ಚಟುವಟಿಕೆಗಳಿಗೂ, ಕರಕುಶಲ ಕಲೆ ಕಸಬುಗಳಿಗೂ ಸಾಲ ದೊರಕುವಂತೆ ಕಾನೂನು ಮಾಡಿತು.

### ನಬಾರ್ಡಿನ ವಿಕಾಸ

**1ನೆಯ ಹಂತ**: 1962ರ ಅಧಿನಿಯಮದ ಪ್ರಕಾರ 1963ರಲ್ಲಿ ಸ್ಥಾಪಿತವಾದ ಕೃಷಿ ಪುನರ್ಧನ ಸಂಸ್ಥೆ 1965ರಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಾರಂಭಿಸಿತು. ಈ ಸಂಸ್ಥೆಯ ಮೂಲ ಉದ್ದೇಶ ಕೃಷಿ ಅಭಿವೃದ್ಧಿಗಾಗಿ ಸಾಲ ಕೊಡುವ ಸಂಸ್ಥೆಗಳಿಗೆ ಪುನರ್ಧನ ರೂಪದಲ್ಲಿ ಹಣವನ್ನು ಕೊಡುವುದು.

**2ನೆಯ ಹಂತ**: 1971–76ರ ನಡುವೆ, ಅಂದರೆ 1972ರಲ್ಲಿ ವಿಶ್ವಬ್ಯಾಂಕಿನ ನೆರವು ಪಡೆದು, ಸಣ್ಣ ನೀರಾವರಿ, ಕೃಷಿ ಯಾಂತ್ರೀಕರಣ, ತೋಟಗಾರಿಕೆ, ಭೂ ಸಮತಲನ ಮತ್ತು ಕೃಷೀತರ ಚಟುವಟಿಕೆಗಳ ಯೋಜನೆಯಲ್ಲಿ ಕೃಷಿಕರಿಗೆ ಸಾಲವನ್ನು ಒದಗಿಸಲು ಈ ಸಂಸ್ಥೆ ಪ್ರಾರಂಭಿಸಿತು. ವೈಜ್ಞಾನಿಕ ಬೆಳವಣಿಗೆ ಹೆಚ್ಚಿದಂತೆ ವಿಶ್ವ ಬ್ಯಾಂಕಿನಿಂದ ತಂದ ಸಾಲವನ್ನು ಕೃಷಿಕರಿಗೆ ಹೆಚ್ಚುಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸಾಲ ಕೊಡಲು ಸರ್ಕಾರ ಯೋಚಿಸಿ 1963ರಲ್ಲಿ ಕೃಷಿ ಪುನರ್ಧನ ಸಂಸ್ಥೆಯನ್ನು ವಿಕಾಸಗೊಳಿಸಿ 1974ರಲ್ಲಿ ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಎಂದು ಅದರ ಹೆಸರನ್ನು ಬದಲಾಯಿಸಿತು.

**3ನೆಯ ಹಂತ**: 1976–1982: 1974ರಲ್ಲಿ ರೂಪುಗೊಂಡ ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಎಲ್ಲ ಕೃಷಿ ಮತ್ತು ಕೃಷೀತರ ಚಟುವಟಿಕೆಗಳ ಯೋಜನೆಗಳಲ್ಲಿ ಎಲ್ಲ ವಾಣಿಜ್ಯ ಹಾಗೂ ಸಹಕಾರಿ ಬ್ಯಾಂಕುಗಳ ಮುಖಾಂತರ ಕೃಷಿಕರಿಗೆ ಸಾಲದ ನೆರವನ್ನು ಕೊಡುವಂತಾಯಿತು. ಕೃಷಿ ಪುನರ್ಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಅದರ ಸಹ ಬ್ಯಾಂಕುಗಳಿಂದ ಕೃಷಿ ಅಭಿವೃದ್ಧಿಗಾಗಿಯೂ ರಿಸರ್ವ್ ಬ್ಯಾಂಕ್ ಮತ್ತು ಅದರ ಸಹಬ್ಯಾಂಕುಗಳಿಂದ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲ ಕೊಡಲೂ ಪುನರ್ಧನ ಒದಗಿಸುತ್ತಿತ್ತು. ಇದರಿಂದ ಕೃಷಿಕರು ಬೇರೆ ಬೇರೆ ಬ್ಯಾಂಕುಗಳಿಗೆ ಸಾಲಕ್ಕಾಗಿ ಪರದಾಡಬೇಕಾಯಿತು. ಕೃಷಿ ಅಭಿವೃದ್ಧಿಗಾಗಿ ಎಲ್ಲ ರೀತಿಯ ಸಾಲವನ್ನು ಮತ್ತು ಕೃಷಿಯ (ವ್ಯವಸಾಯದ) ಜೊತೆಗೆ ಕೃಷೀತರ ಅಂದರೆ ಕರಕುಶಲ ಕೈಗಾರಿಕೆ, ಹೈನುಗಾರಿಕೆ, ಜೇನು ಸಾಕಾಣಿಕೆ, ಗೃಹ ಕೈಗಾರಿಕೆ, ತೆಂಗುನಾರು, ರೇಷ್ಮೆ, ಕೈಮಗ್ಗ, ಮೀನುಗಾರಿಕೆ ಮತ್ತು ಇತರ ಸಣ್ಣ ಪುಟ್ಟ ಕೈಗಾರಿಕೆಗಳಿಗೆ ಒಂದೇ ಸಂಸ್ಥೆ (ಬ್ಯಾಂಕು) ಸಾಲವನ್ನು ಒದಗಿಸುವಂತಾಗಬೇಕೆಂಬ ಕೇಂದ್ರ ಸರಕಾರದ ಆದೇಶದ ಮೇರೆಗೆ ರಿಸರ್ವ್ ಬ್ಯಾಂಕು ಮಾರ್ಚಿ 1979ರಲ್ಲಿ ಬಿ. ಶಿವರಾಮನರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿ ಅಖಿಲ ಭಾರತ ಗ್ರಾಮೀಣ ಪತ್ತು ಸಮಿತಿ ನೀಡಿದ ಸಲಹೆಯನ್ನೂ ಗಣನೆಗೆ ತೆಗೆದುಕೊಂಡು, ಎಲ್ಲ ರಾಜ್ಯಗಳಿಗೆ ಭೇಟಿ ಕೊಟ್ಟು ರಾಜ್ಯ ಸರಕಾರದೊಂದಿಗೆ ಸುದೀರ್ಘವಾಗಿ ಚರ್ಚಿಸಿ ಸಂಘಟಿತ ಗ್ರಾಮೀಣ ಹಾಗೂ ಕೃಷೀತರ ಮತ್ತು ಕರಕುಶಲ ಕೈಗಾರಿಕೆಗಳ ಅಭಿವೃದ್ಧಿಯಾಗಲು ಎಲ್ಲ ಬಗೆಯ —ಅಂದರೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿಯ

---

ಶಾ. ಅಚ್ಚಣ್ಣ, ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಬೆಂಗಳೂರು ೫೬೦ ೦೧೮

ಸಾಲಗಳು ಒಂದೇ ಬ್ಯಾಂಕಿನಿಂದ ವಿತರಣೆಯಾಗಬೇಕೆಂದು, ಗ್ರಾಮೀಣ ಅಭಿವೃದ್ಧಿಗಾಗಿ ವಿವಿಧೋದ್ದೇಶ ಯೋಜನೆಯನ್ನು ತಯಾರಿಸಬೇಕೆಂದು. ಎಲ್ಲ ಸಹಕಾರಿ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಿಗೆ ಎಲ್ಲಾ ತರಹೆಯ ಅಭಿವೃದ್ಧಿ ಕಾರ್ಯಗಳಿಗೆ ಸಾಲವನ್ನು ಮಂಜೂರು ಮಾಡಬೇಕೆಂಬ ಅಂಶವನ್ನು ಗಮನಿಸಿ, ರಾಷ್ಟ್ರಮಟ್ಟದಲ್ಲಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ರಾಷ್ಟ್ರೀಯ ಬ್ಯಾಂಕಿನ ಸ್ಥಾಪನೆ ಆವಶ್ಯಕ ಇದೆ ಎಂಬ ಅಂಶವನ್ನು ಕೂಲಂಕಷವಾಗಿ ವಿವರಿಸಿ ತನ್ನ ವರದಿಯನ್ನು ನವಂಬರ್ 1979ರಲ್ಲಿ ಕೇಂದ್ರ ಸರ್ಕಾರಕ್ಕೆ ಒಪ್ಪಿಸಿತು. ಈ ಕುರಿತ ವಿಧೇಯಕವನ್ನು ಕೇಂದ್ರದ ಎರಡೂ ಸದನಗಳು ಚರ್ಚಿಸಿದುವು. 1981ರಲ್ಲಿ ಡಿಸೆಂಬರಿನಲ್ಲಿ ಇದಕ್ಕೆ ರಾಷ್ಟ್ರಾಧ್ಯಕ್ಷರ ಅನುಮೋದನೆ ದೊರಕಿತು. ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಬಾರ್ಡ್) ಅಧಿನಿಯಮ ಜಾರಿಗೆ ಬಂತು. 1982ರ ಜುಲೈ 16ರಂದು ನೂತನ ಸಂಸ್ಥೆ ಕಾರ್ಯಾರಂಭ ಮಾಡಿತು.

1982ರಲ್ಲಿ ನಬಾರ್ಡ್ ಸ್ಥಾಪನೆಯಾದೊಡನೆ ಅದು ಕಾರ್ಯಪ್ರವೃತ್ತವಾಯಿತು. ಕೃಷೀತರ ವಲಯಕ್ಕೆ ನೀಡುವ ಸಲುವಾಗಿ ಅದು ಅನೇಕ ನೀತಿಗಳನ್ನು ಕಾರ್ಯರೂಪಕ್ಕೆ ತಂದಿತು. ಇದಕ್ಕಾಗಿ ಹಲವು ದಿಕ್ಕುಗಳಲ್ಲಿ ಪ್ರಯತ್ನ ಕೈಗೊಂಡಿತು. ನಬಾರ್ಡ್ ತನ್ನ ಮುಂದೆ ಇಟ್ಟುಕೊಂಡ ಮುಖ್ಯ ಗುರಿಗಳು 12 ಬಗೆ :

1 ಗ್ರಾಮಪ್ರದೇಶದ ಜನರು ನಗರಗಳತ್ತ ಹೋಗದ ಹಾಗೆ ತಡೆಗಟ್ಟಲು ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣಪುಟ್ಟ ಕೈಗಾರಿಕೆಗಳ ಅಭಿವೃದ್ಧಿ.

2 ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯ ವೇಗವನ್ನು ಅಧಿಕಗೊಳಿಸಲು ಅಗತ್ಯವಾದ ಅಧೋರಚನಾತ್ಮಕ ಚಟುವಟಿಕೆಗಳ ಬೆಳವಣಿಗೆ.

3 ರೈತರಿಗೆ ಹಾಗೂ ಸಣ್ಣ ಕಸಬುದಾರರಿಗೆ ಅಗತ್ಯವಾದ ಸಾಮಗ್ರಿಗಳನ್ನು ಒದಗಿಸುವುದು ; ಜೊತೆಗೆ ಅವರು ಉತ್ಪಾದಿಸಿದ ಪದಾರ್ಥಗಳ ಮಾರಾಟ ಸುಸೂತ್ರವಾಗುವಂತೆ ಸಣ್ಣ ವ್ಯಾಪಾರ ಚಟುವಟಿಕೆಗಳ ವಿಸ್ತರಣೆ,

4 ಕೃಷಿ ಮತ್ತು ಕೃಷೀತರ ಯೋಜನೆಗಳಲ್ಲಿ ಸಾಲ ಕೊಟ್ಟಂತಹ ಎಲ್ಲಾ ಬ್ಯಾಂಕುಗಳಿಗೂ ಪುನರ್ಧನ ವ್ಯವಸ್ಥೆ ಮಾಡುವುದು.

5 ಪುನರ್ಧನ ಹೊಂದಿರುವ ಸಾಲದ ಹಣವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವಂತೆ ಉಸ್ತುವಾರಿ ನಡೆಸುವುದು ಹಾಗೂ ಸಾಲದ ಮರುಪಾವತಿ ಮತ್ತು ಸಾಲದ ಸದುಪಯೋಗದ ಬಗ್ಗೆ ಕಾಲಾವಧಿ ನಿಶ್ಚಿತಪಡಿಸುವುದು.

6 ಅಭಿವೃದ್ಧಿ ಯೋಜನೆಯ ಬಗ್ಗೆ ಕಾರ್ಯಕುಶಲತೆ ಹಾಕಿಕೊಳ್ಳುವುದು.

7 ಕೃಷಿ ಮತ್ತು ಕೃಷೀತರ ಉತ್ಪಾದನೆಯಲ್ಲಿ ಸಾಲ ಮಂಜೂರು ಮಾಡಲು ಸರಿಯಾದ ಯೋಜನೆಯನ್ನು ಮತ್ತು ಕಾರ್ಯದ ರೂಪರೇಷೆಯನ್ನು ತಯಾರಿಸುವುದು.

8 ಕೃಷಿ ಮತ್ತು ಕೃಷೀತರ—ಅಂದರೆ ಕರಕುಶಲ ಕೈಗಾರಿಕೆ, ಹೈನುಗಾರಿಕೆ, ಗೃಹ ಕೈಗಾರಿಕೆ, ಜೇನು ಸಾಕಣೆ, ತೋಟಗಾರಿಕೆ, ತೆಂಗುನಾರು, ರೇಷ್ಮೆ, ಕೈಮಗ್ಗ ಮತ್ತು ಇತರ ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ತರಬೇತಿ, ಸಂಶೋಧನೆ ಮತ್ತು ಸಲಹೆಗಳನ್ನು ಕೊಡುವುದು.

9 ಕೆಲವೊಂದು ಸಂದರ್ಭಗಳಲ್ಲಿ ರಾಜ್ಯ ಸರ್ಕಾರ, ಸಹಕಾರಿ ಫೆಡರೇಷನ್, ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಸಂಸ್ಥೆ ಇತ್ಯಾದಿಗಳಿಗೆ ಸಹಕಾರಿ ಕಾರ್ಯಪಥದಲ್ಲಿ ಮಾರ್ಗದರ್ಶನ ಹಾಗೂ ಸಲಹೆ ಕೊಡುವುದು ಮತ್ತು ರಿಸರ್ವ್ ಬ್ಯಾಂಕ್ ಮತ್ತು ಕೇಂದ್ರ ಸರ್ಕಾರಕ್ಕೆ ಮಧ್ಯವರ್ತಿಯಾಗಿ ಕೆಲಸ ಮಾಡುವುದು.

10 ಸಹಕಾರಿ ಬ್ಯಾಂಕುಗಳನ್ನು ಪರೀಕ್ಷಿಸುವುದು.

11 ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಸಂಘಗಳಿಗೆ ಷೇರು ಬಂಡವಾಳ ಒದಗಿಸುವುದು.

12 ಕೇಂದ್ರ ಸರ್ಕಾರದಿಂದ ಮಾನ್ಯತೆ ಪಡೆದಿರುವ ಸಂಘಗಳಿಗೆ ಕೆಲವೊಂದು ವೇಳೆ ನೇರವಾಗಿ ಸಾಲ ಮಂಜೂರು ಮಾಡುವುದು.

**ಸಾಲ ನೀಡಿಕೆಯ ರೂಪರೇಷೆ**

ರಿಸರ್ವ್ ಬ್ಯಾಂಕಿನಿಂದ ಒಪ್ಪಿಗೆ ಪಡೆದ ಎಲ್ಲ ಬಗೆಯ ಸಹಕಾರಿ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳ ಮುಖಾಂತರ ಸಣ್ಣಪುಟ್ಟ ಕೈಗಾರಿಕೆಗಳು, ಹೈನುಗಾರಿಕೆ, ಕೋಳಿ ಸಾಕಣೆ, ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಸಾಲಗಳು, ನೀರಾವರಿ, ತೋಟಗಾರಿಕೆ, ಕೃಷಿ ಯಾಂತ್ರೀಕರಣ, ತೆಂಗಿನ ನಾರು, ರೇಷ್ಮೆ, ಕೈಮಗ್ಗ, ಜೇನು ಸಾಕಣೆ, ಭೂ ಸಮತಲನ ಇತ್ಯಾದಿ ಕೃಷಿ ಮತ್ತು ಕೃಷೀತರ ಉದ್ದೇಶಗಳಿಗೆ ಪುನರ್ಧನ ರೂಪದಲ್ಲಿ ಉದರಿ ನೀಡಲಾಗುತ್ತದೆ ಈ ರೀತಿ ನಬಾರ್ಡ್‌ನಿಂದ ಪುನರ್ಧನ ಹೊಂದಲು, ಅವರು ರಚಿಸಿರುವ ರೂಪರೇಷೆಗಳ ಅನುಸಾರ ಯೋಜನೆಗಳನ್ನು ತಯಾರಿಸಬೇಕು. ಹೀಗೆ ತಯಾರಿಸಿದ ಯೋಜನೆಗಳನ್ನು ಜಾಗ್ರತೆಯಾಗಿ ಕಾರ್ಯರೂಪಕ್ಕೆ ತರಲು ನಬಾರ್ಡ್ ರಾಷ್ಟ್ರದ ಪ್ರತಿಯೊಂದು ರಾಜ್ಯದಲ್ಲಿಯೂ ವಲಯ ಶಾಖೆಗಳನ್ನು ತೆರೆದಿದೆ. ಆಯಾ ವಲಯಗಳಲ್ಲಿ ಈ ಕೆಳಕಂಡಂತೆ ಯೋಜನೆಗಳಿಗೆ ಒಪ್ಪಿಗೆ ಕೊಡಲು ಅಧಿಕಾರವನ್ನು ಕೊಟ್ಟಿದೆ. ಉದರಿ ರೂಪದಲ್ಲಿ ಪುನರ್ಧನ ಸಹಾಯ 3 ವರ್ಷಗಳಿಂದ 25 ವರ್ಷಗಳ ವರೆಗೆ ಇರುತ್ತದೆ.

| ಯೋಜನೆಗಳು (ಲಕ್ಷ ರೂ.ಗಳಲ್ಲಿ) | ನೀರಾವರಿ | ಕೃಷೀತರ ಚಟುವಟಿಕೆಗಳು |
|---|---|---|
| ಉಪ ಪ್ರಧಾನ ವ್ಯವಸ್ಥಾಪಕರು | 55.00 | 55.00 |
| ವ್ಯವಸ್ಥಾಪಕರು | 35.00 | 30 00 |

ಇದಕ್ಕೆ ಮೇಲ್ಪಟ್ಟು ಯೋಜನೆಗಳನ್ನು ರೂಪಿಸಿದಲ್ಲಿ ಕೇಂದ್ರ ಕಛೇರಿಗೆ ಕಳುಹಿಸಿ ಯೋಜನೆಗಳ ಒಪ್ಪಿಗೆ ಪಡೆಯಬೇಕಾಗುತ್ತದೆ.

ಈ ಉದ್ದೇಶಗಳ ಪೂರೈಕೆಗಾಗಿ ನಬಾರ್ಡ್ ಹಲವು ಕಾರ್ಯತಂಡಗಳನ್ನು ರಚಿಸಿದೆ. ಬಹು ಮುಖ್ಯವಾಗಿ ಕೈಮಗ್ಗ, ರೇಷ್ಮೆ, ಖಾದಿ ಮತ್ತು ಗ್ರಾಮ ಕೈಗಾರಿಕೆ, ಕರಕುಶಲ ಕೈಗಾರಿಕೆ, ತೆಂಗಿನ ನಾರು, ಮಾರಾಟಗಾರಿಕೆಯ ಸಂಘಟನೆ—ಈ ಒಂದೊಂದು ಕ್ಷೇತ್ರಕ್ಕೂ ಒಂದೊಂದು ಕಾರ್ಯತಂಡದ ನೇಮಕವಾಯಿತು. ಇದಕ್ಕೆ ಅಗತ್ಯವಾದ ಉದರಿಯನ್ನು ಒದಗಿಸಲು ಯುಕ್ತ ಕ್ರಮಗಳನ್ನು ಶಿಫಾರಸು ಮಾಡುವುದು ಈ ಕಾರ್ಯತಂಡಗಳ ಹೊಣೆಯಾಗಿರುತ್ತದೆ. ಸಹಕಾರಿ ಕ್ಷೇತ್ರಕ್ಕೆ ಸೇರಿದ, ಅದರಿಂದ ಹೊರಗಿರುವ ಎಲ್ಲಾ ಚಟುವಟಿಕೆಗಳಿಗೂ ಉದರಿ ಮುಂತಾದ ನೆರವು ಒದಗಿಸುವುದು ಹೇಗೆಂಬುದನ್ನು ಇದು ಸೂಚಿಸುತ್ತದೆ. ಇವುಗಳ ಶಿಫಾರಸುಗಳ ಮೇಲೆ ನಬಾರ್ಡ್ ಕಾರ್ಯಪ್ರವೃತ್ತವಾಗಿದೆ.

### ಕೈಮಗ್ಗ

ಇದು 20 ಅಂಶಗಳ ಕಾರ್ಯಕ್ರಮದ ಒಂದು ಮುಖ್ಯ ಅಂಶ. 1981ರಲ್ಲಿ ಸರ್ಕಾರ ಘೋಷಿಸಿದ ಜವಳಿ ನೀತಿಯಲ್ಲಿ ಕೈಮಗ್ಗಕ್ಕೆ ಪ್ರಧಾನ ಸ್ಥಾನ ಇದು ಜನಸಾಮಾನ್ಯರಿಗೆ ವಸ್ತ್ರ ಒದಗಿಸುವುದರ ಜೊತೆಗೆ ಗ್ರಾಮಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯ ಜನಕ್ಕೆ ಉದ್ಯೋಗ ನೀಡುತ್ತದೆ ಆರನೆಯ ಯೋಜನೆಯಲ್ಲಿ ಇದಕ್ಕೆ ಪತ್ತು ನೀಡಲಾಗಿದೆ 1979-80ರಲ್ಲಿ ಉತ್ಪಾದನೆ 2,900 ಮಿಾಟರ್. ಇವನ್ನು 1984-85ರ ವೇಳೆಗೆ 4,100 ಮಿಾಟರಿಗೆ ಏರಿಸುವುದು ಯೋಜನೆಯ ಗುರಿ. 62 ಲಕ್ಷ ಜನಕ್ಕೆ ಉದ್ಯೋಗ ನೀಡುತ್ತಿದೆ. 87 ಲಕ್ಷಕ್ಕೆ ಒದಗಿಸುವಂತಾಗಬೇಕು. ರಫ್ತು ರೂ. 261 ಕೋಟಿಯಿಂದ ರೂ 370 ಕೋಟಿಗೆ ಏರಬೇಕು.

ಬ್ಯಾಂಕ್ ದರಕ್ಕಿಂತ ಶೇಕಡ 2½ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುವುದು ರಿಸರ್ವ್ ಬ್ಯಾಂಕಿನ ಕ್ರಮವಾಗಿತ್ತು ಈ ಸೌಲಭ್ಯವನ್ನು ನಬಾರ್ಡ್ ಮುಂದುವರಿಸಿದೆ. ಅಲ್ಲದೆ ನೇಕಾರರ ಪ್ರಾಥಮಿಕ ಸಹಕಾರ ಸಂಘಗಳ ದುಡಿಯುವ ಬಂಡವಾಳದ ಅಗತ್ಯವನ್ನು ಅಳೆಯುವ ಸೂತ್ರಗಳನ್ನು ಉದಾರಗೊಳಿಸಲಾಗಿದೆ ಶೃಂಗ (ಅಪೆಕ್ಸ್) ಕೈಮಗ್ಗ ನೇಕಾರ ಸಂಘಗಳು ಈ ಸರಕುಗಳ ಮಾರಾಟದ ಹೊಣೆ ಹೊತ್ತಿವೆ. ಇದಕ್ಕೂ ಉದರಿ ನೀಡಿಕೆಯಲ್ಲಿ ಸೂತ್ರಗಳನ್ನು ಉದಾರಗೊಳಿಸಲಾಗಿದೆ ನಿರೀಕ್ಷಿತ ವಿಕ್ರಯದ ಶೇ. 25ರಿಂದ ಶೇ. 40ಕ್ಕೂ ಅವುಗಳ ದುಡಿಯುವ ಬಂಡವಾಳದ ಅಗತ್ಯವನ್ನು ಹೆಚ್ಚಿಸಲಾಗಿದೆ. ಹೀಗೆ ಕೈಮಗ್ಗ ವಲಯಕ್ಕೆ ಉದರಿ ಹೆಚ್ಚು ಹರಿಯತೊಡಗಿದೆ. ಕೈಮಗ್ಗಗಳನ್ನು ಕೊಳ್ಳಲೂ ಆಧುನೀಕರಿಸಲೂ ಉದರಿ ನೀಡಲಾಗುತ್ತದೆ. ಇವಕ್ಕೆ ಧನ ಪೋಷಣೆ ಮಾಡುವ ಬ್ಯಾಂಕುಗಳಿಗೆ ಪುನರ್ಧನ ಪೋಷಣೆಗೆ ಶೇ. 90ರ ವರೆಗೆ ಬಡ್ಡಿ ದರದಲ್ಲಿ ರಿಯಾಯಿತಿ, ಶೇ 6½ಯಂತೆ ಬಡ್ಡಿದರದಲ್ಲಿ, ಮಾರಾಟಕ್ಕಾಗಿ ಮಳಿಗೆಗಳನ್ನು ತೆರೆಯಲು ನೇಕಾರರ ಶೃಂಗ ಹಾಗೂ ಪ್ರಾದೇಶಿಕ ಸಂಘಗಳಿಗೆ ಮುಂಗಡ ನೀಡಲು ರಾಜ್ಯ ಸಹಕಾರಿ ಬ್ಯಾಂಕುಗಳಿಗೆ ನಬಾರ್ಡ್‌ನಿಂದ ಪುನರ್ಧನ ಪೋಷಣೆ, ಅನುಭೋಗಿ ಮಾದರಿ ಸಹಕಾರಿ ನೂಲು ಗಿರಣಿಗಳ ಬಂಡವಾಳದಲ್ಲಿ ಷೇರು ಪಡೆಯಲು ಕೈಮಗ್ಗ ನೇಕಾರರಿಗೆ ನೆರವು ನೀಡಲು ರಾಜ್ಯ ಸಹಕಾರಿ ಬ್ಯಾಂಕುಗಳಿಗೆ ಬ್ಯಾಂಕ್ ದರಕ್ಕಿಂತ ಶೇ. 2½ಯಷ್ಟು ಕಡಿಮೆ ಬಡ್ಡಿ ದರದಲ್ಲಿ ಪುನರ್ಧನ ಪೋಷಣೆ

### ರೇಷ್ಮೆ

ಗ್ರಾಮ ಪ್ರದೇಶದಲ್ಲಿ ಸುಮಾರು 45 ಲಕ್ಷ ಜನಕ್ಕೆ ಉದ್ಯೋಗ ಒದಗಿಸುವ ಈ ಕೈಗಾರಿಕೆಗೆ ಕೈಗಾರಿಕಾ ಪುನರ್ಧನಪೋಷಣೆ ಮತ್ತು ಅಭಿವೃದ್ಧಿ ನಿಗಮ (ಎಆರ್‌ಡಿಸಿ) (ಕರ್ನಾಟಕ ಸರ್ಕಾರ) ದಿಢೀರ್ ಕಾರ್ಯಕ್ರಮದ ಅಡಿಯಲ್ಲಿ ನೆರವು ನೀಡುತ್ತಿತ್ತು. ವಾಣಿಜ್ಯ ಬ್ಯಾಂಕುಗಳಿಗೆ ಹಾಗೂ ಸಹಕಾರಿ ಬ್ಯಾಂಕುಗಳಿಗೆ ಪುನರ್ಧನ ಪೋಷಣೆ ನೀಡುತ್ತಿತ್ತು. ಈ ಕಾರ್ಯಕ್ರಮವನ್ನು ನಬಾರ್ಡ್ ಇತರ ರಾಜ್ಯಗಳಿಗೂ ವಿಸ್ತರಿಸಿತು 1983ರ ಸೆಪ್ಟೆಂಬರ್ ವೇಳೆಗೆ ಅದು ವಿವಿಧ ರಾಜ್ಯಗಳಲ್ಲಿ 142 ಕಾರ್ಯಕ್ರಮಗಳಿಗೆ ಮಂಜೂರಾತಿ ನೀಡಿತ್ತು ಇದರ ಒಟ್ಟು ಹಣ ರೂ. 22 ಕೋಟಿ. ಹಿಪ್ಪುನೇರಳೆಯಲ್ಲದೆ ಇತರ ಕ್ಷೇತ್ರಗಳಾದ ಟಸ್ಸಾರ್, ಹುರಿ, ಮಗ್ಗ ಮುಂತಾದವಕ್ಕೂ ನೆರವು ವಿಸ್ತರಿಸಬೇಕೆಂಬುದು ಕಾರ್ಯತಂಡದ ಸಲಹೆ. ರೇಷ್ಮೆ ದಾರ ಸುತ್ತುವುದು, ಹುರಿಮಾಡುವುದು ಮುಂತಾದವಕ್ಕೂ ಬಂಡವಾಳ ಹಾಕಲು (ಸಹಕಾರಿ ಹಾಗೂ ಸಹಕಾರೇತರ ಕ್ಷೇತ್ರಗಳಲ್ಲಿ) ನೆರವು ನೀಡಬೇಕೆಂದು ಅದು ಸಲಹೆ ಮಾಡಿದೆ. ನಬಾರ್ಡ್ ಇದಕ್ಕೆ ಪ್ರತ್ಯೇಕ ಒಪ್ಪಿಗೆ ನೀಡಿದೆ. ವಿದೇಶಿ ವಿನಿಮಯ ಸಂಪಾದನೆಯಲ್ಲಿ ನಮ್ಮ ದೇಶ 3ನೆಯ ಸ್ಥಾನ ಹೊಂದಿದೆ.

### ತೆಂಗಿನ ನಾರು

ಯಥೇಚ್ಛವಾಗಿರುವ ತೆಂಗಿನ ನಾರಿನಿಂದ ಉತ್ಪಾದನೆ. ರೂ. 10 ಕೋಟಿಯ ಮೌಲ್ಯದ ನಾರಿನಿಂದ ರೂ. 100 ಕೋಟಿಯ ಮೌಲ್ಯದ ಪದಾರ್ಥ ತಯಾರಿಕೆಯಾಗುತ್ತದೆ. ವಿದೇಶೀ ವಿನಿಮಯವೂ ಸಂಪಾದನೆಯಾಗುತ್ತದೆ. ಬ್ಯಾಂಕ್ ದರಕ್ಕಿಂತ ಶೇ. 2½ ಕಡಿಮೆ ಬಡ್ಡಿ ದರದಲ್ಲಿ ದುಡಿಯುವ ಬಂಡವಾಳ ಪೂರೈಸುವ ರಿಸರ್ವ್ ಬ್ಯಾಂಕಿನ ಕ್ರಮವನ್ನು ನಬಾರ್ಡ್ ಮುಂದುವರಿಸಿದೆ. ಸಹಕಾರಿ ಸಂಘಗಳ ದುಡಿಯುವ ಬಂಡವಾಳದ ಅಗತ್ಯಗಳನ್ನು ನಿರ್ಧರಿಸುವ ಸೂತ್ರಗಳನ್ನು ಸಡಿಲಗೊಳಿಸಿದೆ. ಕಾರ್ಯತಂಡದ ಶಿಫಾರಸಿನ ಮೇಲೆ ಕೈಗಾರಿಕೆಯ ಅಭಿವೃದ್ಧಿಗೆ ಬಂಡವಾಳ ಒದಗಿಸಲು ನಬಾರ್ಡ್ ಯೋಜಿಸುತ್ತಿದೆ.

ಸಣ್ಣ ಪುಟ್ಟ ಕೈಗಾರಿಕೆಗಳಿಗೆ ನೆರವು ನೀಡಲೂ ಯೋಜನೆಯಿದೆ. ಗುಡಿಸಲು ಹಾಗೂ ಸಣ್ಣ ಕೈಗಾರಿಕೆಗಳನ್ನು 22 ಗುಂಪುಗಳಾಗಿ ವಿಂಗಡಿಸಲಾಗಿದೆ. ಬ್ಯಾಂಕ್ ದರಕ್ಕಿಂತ ಶೇ. 2½ ಕಡಿಮೆ ದರದಲ್ಲಿ ಪುನರ್ಧನ ಪೋಷಣೆ; ನಿದ್ರಿಸುತ್ತಿರುವ ಕೈಗಾರಿಕಾ ಸಹಕಾರ ಸಂಘಗಳ ಪುನಶ್ಚೇತನ, ನಿರೀಕ್ಷಿತ ಉತ್ಪಾದನೆಯ ಶೇ. 25ರ ಬದಲು ಶೇ. 40ರಷ್ಟು ದುಡಿಯುವ ಬಂಡವಾಳ ಒದಗಿಸಲು ಅಗತ್ಯವಾದ ಸೂತ್ರದ ಒಪ್ಪಿಗೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಎ.ಆರ್.ಡಿ ಸಿ. ನೀಡುತ್ತಿದ್ದ ಪುನರ್ಧನ ಪೋಷಣೆಗೆ ನೆರವು ಮುಂದುವರಿದಿದೆ. ಪ್ರತಿ ಬ್ಯಾಂಕಿನಲ್ಲೂ ಅದನ್ನು ಗುರುತಿಸಲಾದ 600 ಕುಟುಂಬಗಳಿಗೆ ನೆರವು ನೀಡುತ್ತಿತ್ತು. ಉಳಿದ ಗುರುತಿಸಲಾದ 200 ಕುಟುಂಬಗಳಿಗೂ ನೆರವು ನೀಡಲು ಉದ್ದೇಶವಿದೆ. ಸಾಂಸ್ಥಿಕ ಉದರಿ ಸುಸೂತ್ರವಾಗಿ ಹರಿಯುವಂತೆ ಕ್ರಮ ತೆಗೆದುಕೊಳ್ಳುತ್ತಿದೆ. ಕ್ಷೇತ್ರಾಭಿವೃದ್ಧಿಯ ಇತರ ಕಾರ್ಯಕ್ರಮಗಳೊಂದಿಗೆ ಹೊಂದಾಣಿಕೆ, ಜಿಲ್ಲಾ ಮಟ್ಟದಲ್ಲಿ ಸಂಘಟನಾತ್ಮಕ ತಳಹದಿಯ ಸೂಕ್ತ ಪುನರ್ರಚನೆ, ಯುಕ್ತ ತಂತ್ರಜ್ಞಾನ ಹಾಗೂ ಕೌಶಲದ ಬೆಳವಣಿಗೆ, ಕಚ್ಚಾ ಸಾಮಗ್ರಿಯ ಬದಲಾವಣೆ, ಗುಡಿಸಲು ಮತ್ತು ಸಣ್ಣ ಕೈಗಾರಿಕೆಗಳಿಗಾಗಿಯೇ ಕೆಲವು ಸರಕುಗಳ ಮೀಸಲು, ಸಹಕಾರಿ ಕ್ಷೇತ್ರದ ಸಮರ್ಥನೆ ಹಾಗೂ ವಿಸ್ತರಣೆ, ಅಂಕಿಅಂಶಗಳ ಸಮರ್ಪಕತೆ—ಈ ನಿಟ್ಟಿನಲ್ಲೂ ನಬಾರ್ಡ್ ಕಾರ್ಯಪ್ರವೃತ್ತವಾಗಿದೆ.

### ನಬಾರ್ಡಿನ ಮುಖ್ಯ ರೂಪರೇಖೆ ಮತ್ತು ಸಂಘಟನೆ

ಈ ಸಂಸ್ಥೆಯ ಕೇಂದ್ರ ಕಛೇರಿ ಮುಂಬಯಿಯಲ್ಲಿ ಇದೆ. ಕೇಂದ್ರ ಸರ್ಕಾರ ಇದನ್ನು ಬದಲಾವಣೆ ಮಾಡುವ ಅಧಿಕಾರ ಹೊಂದಿದೆ. ಇದು ಈ ಕೆಳಗಿನ ರಾಜ್ಯಗಳಲ್ಲಿ ತನ್ನ ವಲಯ ಕಛೇರಿಗಳನ್ನು ಹೊಂದಿರುತ್ತದೆ :

1 ಅಹಮದಾಬಾದ್, 2 ಬೆಂಗಳೂರು, 3 ಕಲ್ಕತ್ತ, 4 ಭೂಪಾಲ್, 5 ಭುವನೇಶ್ವರ್, 6 ಮುಂಬಯಿ, 7 ಚಂಢೀಗಢ, 8 ಗೌಹಾಟಿ, 9 ಹೈದರಾಬಾದ್, 10 ಜೈಪುರ್, 11 ಲಖನೌ, 12 ಮದ್ರಾಸ್, 13 ಹೊಸ ದೆಹಲಿ, 14 ಪಾಟ್ನ, 15 ಶ್ರೀನಗರ, 16 ತಿರುವನಂತಪುರ.ಉಪ ಕಛೇರಿ: 1 ಅಗರ್‌ತಲಾ, 2 ಜಮ್ಮು, 3 ಪಣಜಿ, 4 ಸಿಮ್ಲಾ.

### ನಿರ್ದೇಶಕ ಮಂಡಳಿ

ಈ ಸಂಸ್ಥೆಯಲ್ಲಿ ಒಟ್ಟು 15 ಜನರ ನಿರ್ದೇಶಕ ಮಂಡಳಿ ಇರುತ್ತದೆ. ಈ ನಿರ್ದೇಶಕ ಮಂಡಳಿಯನ್ನು ಕೇಂದ್ರ ಸರ್ಕಾರ ರಿಸರ್ವ್ ಬ್ಯಾಂಕಿನ ಸಲಹೆ ಪಡೆದು ನೇಮಿಸಿರುತ್ತದೆ.

| | | |
|---|---|---|
| 1 | ಅಧ್ಯಕ್ಷರು (ರಿಸರ್ವ್ ಬ್ಯಾಂಕಿನ ಡೆಪ್ಯೂಟಿ ಗವರ್ನರ್) | 1 |
| 2 | ವ್ಯವಸ್ಥಾಪಕ ನಿರ್ದೇಶಕರು | 1 |
| 3 | ಗ್ರಾಮೀಣ ಅರ್ಥಶಾಸ್ತ್ರಜ್ಞ—ವಿವಿಧತೆಯ ನಿಪುಣರು | 2 |
| 4 | ಸಹಕಾರಿ-ವಾಣಿಜ್ಯ ಬ್ಯಾಂಕುಗಳಲ್ಲಿ ನಿಪುಣರಾದಂತಹವರು | 3 |
| 5 | ರಿಸರ್ವ್ ಬ್ಯಾಂಕಿನಿಂದ | 3 |
| 6 | ಕೇಂದ್ರ ಸರ್ಕಾರದ ಅಧಿಕಾರಿಗಳು | 3 |
| 7 | ರಾಜ್ಯ ಸರ್ಕಾರದ ಅಧಿಕಾರಿಗಳು | 2 |
| | | 15 |

### ಸ್ವಂತ ಬಂಡವಾಳ

1981ನೆಯ ಇಸವಿಯ ಅಧಿನಿಯಮದ ಪ್ರಕಾರ ಈ ಸಂಸ್ಥೆಯ ಸ್ವಂತಬಂಡವಾಳ ಪ್ರಥಮವಾಗಿ ಒಂದು ನೂರು ಕೋಟಿ ರೂಪಾಯಿ ಆಗಿದ್ದು, ಈ ಬಂಡವಾಳವನ್ನು ಕೇಂದ್ರ ಸರ್ಕಾರ ಹಾಗೂ ರಿಸರ್ವ್ ಬ್ಯಾಂಕ್ ಸಮಸಮನಾಗಿ ಸಂದಾಯಮಾಡಿರುತ್ತದೆ.

### ಸಂಪನ್ಮೂಲ

ದೀರ್ಘಾವಧಿ ಮತ್ತು ಸ್ಥಾಯೀಕರಣ ಹಣವನ್ನು ರಿಸರ್ವ್ ಬ್ಯಾಂಕ್ ಈ ಸಂಸ್ಥೆಗೆ ವರ್ಗಾಯಿಸುವುದಲ್ಲದೆ, ಕೇಂದ್ರ ಮತ್ತು ರಾಜ್ಯ ಸರ್ಕಾರ ಕೊಡುವ ವಂತಿಗೆಯ ಜೊತೆಗೆ ರಿಸರ್ವ್ ಬ್ಯಾಂಕ್ ಪ್ರತಿ ವರ್ಷವೂ ಈ ಹಣವನ್ನು ಬಿಡುಗಡೆ ಮಾಡುತ್ತಿರುತ್ತದೆ.

### ಸಾಲ ತೆಗೆಯುವುದು

ಈ ಸಂಘ ಬಾಂಡ್‌ಗಳನ್ನು ಮತ್ತು ಕೇಂದ್ರ ಸರ್ಕಾರದ ಅನುಮತಿ ಹೊಂದಿರುವ ಹಾಗೂ ರಿಸರ್ವ್ ಬ್ಯಾಂಕಿನಿಂದ ಒಪ್ಪಿಗೆ ಪಡೆದ ಸಾಲ ಪತ್ರಗಳನ್ನು ವಿಲೇವಾರಿ ಮಾಡಿ ಸಾಲ ಪಡೆಯಬಹುದು. ರಿಸರ್ವ್ ಬ್ಯಾಂಕ್ ಮತ್ತು ಸರ್ಕಾರದ ಒಪ್ಪಿಗೆ ಪಡೆದು ಇತರ ಸಂಘಸಂಸ್ಥೆಗಳಿಂದ ಎರವಲು ಹಣ ಪಡೆಯಬಹುದು.

### ಸಿಬ್ಬಂದಿ

ಈ ಸಂಸ್ಥೆಯ ಅಧಿನಿಯಮದ ಪ್ರಕಾರ ಸಿಬ್ಬಂದಿ ವರ್ಗ ತನ್ನ ರೂಪರೇಷೆಯನ್ನು ಹೊಂದಿರುತ್ತದೆ. ತಕ್ಷಣಕ್ಕೆ ರಿಸರ್ವ್ ಬ್ಯಾಂಕ್ ಮತ್ತು ಕೃಷಿ ಪುನರ್ಧನ ಮತ್ತು ಅಭಿವೃದ್ಧಿ ಸಂಸ್ಥೆಯ ಸಿಬ್ಬಂದಿ ವರ್ಗವೇ ಇಲ್ಲಿಯ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾ ಇರುತ್ತದೆ.

### ವರಮಾನ ತೆರಿಗೆ

ಈ ಸಂಸ್ಥೆಯಲ್ಲಿ ಬರುವ ಲಾಭದ ಮೇಲೆ ಆದಾಯ ತೆರಿಗೆ ಅಥವಾ ಇನ್ನಾವ ತೆರಿಗೆಯನ್ನೂ ಕೊಡಬೇಕಾಗಿರುವುದಿಲ್ಲ.

ಗ್ರಾಮೀಣ ಅಭಿವೃದ್ಧಿ ಯೋಜನೆ ಹಾಗೂ 20 ಅಂಶಗಳ ಕಾರ್ಯಕ್ರಮದಲ್ಲಿ ಕೃಷಿ ಮತ್ತು ಕೃಷೀತರ ಚಟುವಟಿಕೆಗಳಿಗಾಗಿ ಪ್ರತ್ಯೇಕ ಬ್ಯಾಂಕೊಂದನ್ನು ಕೇಂದ್ರ ಸರ್ಕಾರ ರಾಷ್ಟ್ರಮಟ್ಟದಲ್ಲಿ ಸ್ಥಾಪಿಸಿ, ಎಲ್ಲಾ ಸಹಕಾರಿ ಬ್ಯಾಂಕುಗಳು, ಸಂಘಸಂಸ್ಥೆಗಳು, ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯಬ್ಯಾಂಕುಗಳ ಮುಖಾಂತರ ಹಿಂದುಳಿದ ಜನಾಂಗದ ಬಡತನ ನಿವಾರಣೆ, ನಿರುದ್ಯೋಗ ನಿವಾರಣೆಗಳಿಗೆ ಉದರಿಯನ್ನು ಪುನರ್ಧನ ರೂಪದಲ್ಲಿ ಹಣವನ್ನು ತೊಡಗಿಸಲಿದೆ. ಅದರ ಉಪಯುಕ್ತತೆಯನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು ನಮ್ಮ ದೇಶ ಮುಂದೆ ಬರುತ್ತದೆ ಎಂದು ಆಶಿಸಬಹುದು.

★

● ● ●

ಕೃಷಿ ಮತ್ತು ಗ್ರಾಮಾಭಿವೃದ್ಧಿಗಾಗಿ ಎಲ್ಲ ಬಗೆಯ ಉತ್ಪಾದಕ ಹಾಗೂ ವಿನಿಯೋಜಕ ಉದರಿಯನ್ನೊದಗಿಸಲು ಹಾಗೂ ಸಮಗ್ರ ಗ್ರಾಮೀಣ ಅಭಿವೃದ್ಧಿಯ ಅಭಿಕರಣವಾಗಿ ಕಾರ್ಯ ನಿರ್ವಹಿಸಲು ರಾಷ್ಟ್ರೀಯ ಕೃಷಿ ಮತ್ತು ಗ್ರಾಮಾಭಿವೃದ್ಧಿ ಬ್ಯಾಂಕಿನ ಸ್ಥಾಪನೆಯಾಗಬೇಕೆಂದು ಕೃಷಿ ಮತ್ತು ಗ್ರಾಮಾಭಿವೃದ್ಧಿ ಕುರಿತ ಸಾಂಸ್ಥಿಕ ಉದರಿ ವ್ಯವಸ್ಥೆಯನ್ನು ಪರಿಶೀಲಿಸಿದ ಸಮಿತಿ ಮಾರ್ಚ್ 1981ರಲ್ಲಿ ರಿಸರ್ವ್ ಬ್ಯಾಂಕಿಗೆ ಸಲ್ಲಿಸಿದ ವರದಿಯಲ್ಲಿ ಶಿಫಾರಸು ಮಾಡಿತ್ತು. ನಬಾರ್ಡ್ ಸ್ಥಾಪನೆಗಾಗಿ ವಿಧೇಯಕವೊಂದನ್ನು ಸಂಸತ್ತು ಸ್ವೀಕರಿಸಿತು. 1981ರ ಡಿಸೆಂಬರ್ 30ರಂದು ರಾಷ್ಟ್ರಪತಿ ಇದಕ್ಕೆ ಅನುಮೋದನೆ ನೀಡಿದರು. 1982ರ ಜುಲೈ 12ರಂದು ನಬಾರ್ಡ್ ಅಸ್ತಿತ್ವಕ್ಕೆ ಬಂತು.

**(ಭಾರತೀಯ ರಿಸರ್ವ್ ಬ್ಯಾಂಕ್ ವರದಿ, 1981–82)**

# ಅಸ್ವಸ್ಥ ಘಟಕಗಳ ಪುನರುಜ್ಜೀವನ

ಬಿ. ಎಸ್. ಚಂದ್ರಶೇಖರ

**ಅಸ್ವಸ್ಥ ಕೈಗಾರಿಕಾ ಘಟಕಗಳ ಸ್ವರೂಪ, ಅವುಗಳ ಸಮಸ್ಯೆಗಳು, ಅವನ್ನು ಮರಳಿ ಸ್ವಸ್ಥ ಸ್ಥಿತಿಗೆ ತರುವುದಕ್ಕೆ ಅಗತ್ಯವಾದ ಶುಶ್ರೂಷೆ—ಇವನ್ನು ಕುರಿತ ಚಿಂತನೆ ಈ ಲೇಖನದಲ್ಲಿದೆ.**

ಈಚಿನ ವರ್ಷಗಳಲ್ಲಿ ಕೈಗಾರಿಕೆಗಳ ಅಸ್ವಾಸ್ಥ್ಯದ ಸಮಸ್ಯೆ ಗಂಭೀರ ಸ್ವರೂಪ ತಳೆದಿದ್ದು ಈ ಸಮಸ್ಯೆಗೆ ತುರ್ತು ಪರಿಹಾರ ಕಂಡುಕೊಳ್ಳುವುದು ಅಗತ್ಯವಾಗಿದೆ. ಒಂದೆಡೆ ಸರ್ಕಾರ ಧಾರಾಳ ಹಣಕಾಸು ನೆರವು ಮತ್ತು ವಿವಿಧ ಉತ್ತೇಜನಗಳಿಂದ ಕೈಗಾರಿಕೆಗಳ ಸ್ಥಾಪನೆಯನ್ನು ಪ್ರೋತ್ಸಾಹಿಸುತ್ತಿದ್ದರೆ ಇನ್ನೊಂದೆಡೆ ಅನೇಕ ಕೈಗಾರಿಕಾ ಘಟಕಗಳು ಸ್ವಾಸ್ಥ್ಯ ಕಳೆದುಕೊಂಡು ಸೊರಗಿ ಸ್ತಬ್ಧವಾಗುತ್ತಿವೆ. ಜೂನ್ 1982ರಲ್ಲಿ ಸುಮಾರು 28,360 ಅಸ್ವಸ್ಥ ಘಟಕಗಳು ರೂ. 2,300 ಕೋಟಿ ಬ್ಯಾಂಕ್ ನಿಧಿಯನ್ನು ಸ್ಥಗಿತಗೊಳಿಸಿದ್ದವು. ಇದಲ್ಲದೆ ಭಾರತದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್, ಕೈಗಾರಿಕಾ ಹಣಕಾಸು ನಿಗಮ, ಭಾರತದ ಜೀವವಿಮಾ ನಿಗಮ ಮುಂತಾದ ಇತರ ಹಣಕಾಸು ಸಂಸ್ಥೆಗಳಿಗೆ 275 ಅಸ್ವಸ್ಥ ಘಟಕಗಳು ರೂ. 554 ಕೋಟಿ ಋಣಿಯಾಗಿದ್ದವು.

ಅಧಿಕ ಉತ್ಪಾದನೆ, ಅಧಿಕ ಉದ್ಯೋಗ ಮತ್ತು ಹೊಸ ಹಣ ವಿನಿಯೋಜನೆ—ಇವು ಕೈಗಾರಿಕಾ ಪ್ರಗತಿಯ ಮತ್ತು ರಾಷ್ಟ್ರದ ಉನ್ನತಿಯ ದೃಷ್ಟಿಯಿಂದ ಅತ್ಯಗತ್ಯವಾಗಿವೆ. ಕೈಗಾರಿಕಾ ಘಟಕಗಳು ಸ್ವಸ್ಥವಾಗಿ ತಮ್ಮ ಕಾರ್ಯ ನಿರ್ವಹಿಸಿ ಲಾಭಪ್ರದತೆಯನ್ನು ಉಳಿಸಿಕೊಳ್ಳಲು ಸಾಧ್ಯವಾದರೆ ಮಾತ್ರ ಉತ್ಪಾದನೆ ಹಾಗೂ ಉದ್ಯೋಗಾವಕಾಶಗಳು ಹೆಚ್ಚಲು ಸಾಧ್ಯ. ಇಲ್ಲದಿದ್ದರೆ, ಈ ಅನುಕೂಲಗಳು ತಪ್ಪುವುದಲ್ಲದೆ, ಅಂಥ ಘಟಕಗಳಲ್ಲಿ ವಿನಿಯೋಗಿಸಲ್ಪಟ್ಟ ಹಣ ವ್ಯರ್ಥವಾಗುತ್ತದೆ. ಕೈಗಾರಿಕೆಯಲ್ಲಿ ಅಸ್ವಾಸ್ಥ್ಯ ವ್ಯಾಪಕವಾದರೆ ಹೊಸ ಉದ್ಯಮಿಗಳು ಆ ಕ್ಷೇತ್ರಕ್ಕೆ ಕಾಲಿಡಲು ಹಿಂದೇಟುಹಾಕುವಂತಾಗುತ್ತದೆ.

ಕೈಗಾರಿಕೆಗಳ ಅಸ್ವಾಸ್ಥ್ಯದ ಸಮಸ್ಯೆ ವಿಶ್ವವ್ಯಾಪಿಯಾದುದು. ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಮುಂದುವರಿದ ದೇಶಗಳಲ್ಲಿಯೂ ಭಾರಿ ಸಂಸ್ಥೆಗಳು ರೋಗಗ್ರಸ್ತವಾಗಿ ಪತನ ಹೊಂದಿವೆ (ಬ್ರಿಟನ್ನಿನ ರೋಲ್ಸ್‌ರಾಯ್ಸ್ ಮತ್ತು ಅಮೆರಿಕದ ಪೆನ್ ಸೆಂಟ್ರಲ್ ರೈಲ್ವೆ ಕಂಪನಿಗಳ ಪತನವನ್ನು ಇಲ್ಲಿ ಉದಾಹರಿಸಬಹುದು.) ಎಂದರೆ ಈ ಸಮಸ್ಯೆಯ ಬೃಹತ್ ಸ್ವರೂಪ ತಿಳಿದೀತು.

ಅಸ್ವಸ್ಥ ಕೈಗಾರಿಕಾ ಘಟಕಗಳ ಸ್ವರೂಪ, ಅವುಗಳ ಸಮಸ್ಯೆಗಳು ಮತ್ತು ಅವನ್ನು ಮರಳಿ ಸ್ವಾಸ್ಥ್ಯಕ್ಕೆ ತರಲು ನಡೆಸಬಹುದಾದ ಶುಶ್ರೂಷೆ ಇವುಗಳನ್ನು ಕುರಿತು ಚಿಂತಿಸುವ ಪ್ರಯತ್ನ ಈ ಲೇಖನದಲ್ಲಿದೆ. ಕೈಗಾರಿಕಾ ಅಸ್ವಸ್ಥತೆಗೆ ಇತರ ಪರಿಹಾರೋಪಾಯಗಳನ್ನೂ ಲೇಖನದಲ್ಲಿ ಸಂಕ್ಷೇಪವಾಗಿ ಹೇಳಲಾಗಿದೆ.

## ಯಾವುದು ಅಸ್ವಸ್ಥ ಘಟಕ ?

ಅಸ್ವಸ್ಥ ಕೈಗಾರಿಕಾ ಘಟಕಗಳನ್ನು ಸ್ವಸ್ಥವಾದವುಗಳೊಂದಿಗೆ ಸಮಾಮೇಲನ (amalgamation)ಗೊಳಿಸುವುದನ್ನು ಪ್ರೋತ್ಸಾಹಿಸಲು ಹಲವು ತೆರಿಗೆ ರಿಯಾಯಿತಿಗಳನ್ನು ನೀಡಲು 1977ರಲ್ಲಿ ಭಾರತ ಸರ್ಕಾರ ನಿರ್ಧರಿಸಿದ್ದು ಈ ಉದ್ದೇಶಕ್ಕಾಗಿ ಅಸ್ವಸ್ಥ ಘಟಕಗಳನ್ನು ಹೀಗೆ ವ್ಯಾಖ್ಯೆ ಮಾಡಲಾಯಿತು : 'ಕೂಡಿ ಬಂದ ನಷ್ಟಗಳು ಕಂಪನಿಯ ಒಟ್ಟು ಪಾವತಿಯಾದ ಬಂಡವಾಳ ಮತ್ತು ಮೀಸಲಿನ ಶೇ. 50ನ್ನು ಮೀರಿದ್ದು, ಕಂಪನಿಯು ಆರ್ಥಿಕ ಜೀವಂತಿಕೆ ಹೊಂದಿಲ್ಲದಿದ್ದರೆ ಅದು ಅಸ್ವಸ್ಥ ಎನಿಸುತ್ತದೆ.' ಇಲ್ಲಿ ಉದ್ಯಮವೊಂದರಲ್ಲಿ ಲಾಭಗಳಿಕೆಯ ಪ್ರಾಮುಖ್ಯವನ್ನು ಎತ್ತಿ ಹಿಡಿಯಲಾಗಿದೆಯಾದರೂ ಅಸ್ವಸ್ಥ ಘಟಕಗಳ ಈ ವ್ಯಾಖ್ಯೆಯನ್ನು ತೆರಿಗೆ ವಿನಾಯಿತಿ ನೀಡುವ ವಿಶಿಷ್ಟ ಉದ್ದೇಶದಿಂದ ನೀಡಲಾಗಿದೆಯಾದ್ದರಿಂದ ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳು ಈ ವ್ಯಾಖ್ಯೆಯನ್ನು ಆಧರಿಸುವಂತಿಲ್ಲ.

ಸಣ್ಣ ಕೈಗಾರಿಕೆಗಳಲ್ಲಿನ ಅಸ್ವಾಸ್ಥ್ಯವನ್ನು ಕುರಿತು ಪರಿಶೀಲನೆ ನಡೆಸಲು ಭಾರತೀಯ ಸ್ಟೇಟ್ ಬ್ಯಾಂಕು 1975ರಲ್ಲಿ ಅಧ್ಯಯನ ತಂಡವೊಂದನ್ನು ನೇಮಿಸಿತು. ಈ ಅಧ್ಯಯನ ತಂಡವು 'ನಿರಂತರವಾಗಿ ಆಂತರಿಕ ಹೆಚ್ಚುವರಿಯನ್ನು ಉತ್ಪಾದಿಸಲು ವಿಫಲವಾಗುವ ಒಂದು ಘಟಕ' ಎಂದು ಅಸ್ವಸ್ಥ ಘಟಕವನ್ನು ವ್ಯಾಖ್ಯಿಸಿತು. ಈ ವ್ಯಾಖ್ಯೆಯ ಆಧಾರದ ಮೇಲೆ 'ಒಂದು ವರ್ಷ ನಗದು ನಷ್ಟ ಹೊಂದಿ ಬ್ಯಾಂಕಿನ ನಿರ್ಣಯದಂತೆ ಪ್ರಸಕ್ತ ಮತ್ತು ಮುಂದಿನ ವರ್ಷಗಳಲ್ಲೂ ನಗದು ನಷ್ಟ ಹೊಂದುವ ಸಾಧ್ಯತೆಗಳಿರುವ, ಹಾಗೂ ಚಾಲ್ತಿ ಅನುಪಾತ 1 : 1ಕ್ಕಿಂತ ಕಡಮೆ ಇದ್ದು ಋಣ—ಸ್ವಂತ ಬಂಡವಾಳ ಅನುಪಾತ (debt—equity ratio) ಕೆಡುತ್ತಿರುವ ಒಂದು ಘಟಕವು ಅಸ್ವಸ್ಥ ಘಟಕ ಎನಿಸುತ್ತದೆ' ಎಂದು ಭಾರತದ ರಿಸರ್ವ್ ಬ್ಯಾಂಕ್ ಎಲ್ಲ ವಾಣಿಜ್ಯ ಬ್ಯಾಂಕುಗಳಿಗೆ ತಿಳಿಯಪಡಿಸಿದೆ.

ನಗದು ನಷ್ಟ ಎಂದರೆ ಸ್ಥಿರಾಸ್ತಿ ಮತ್ತು ಚರಾಸ್ತಿಗಳ ಮೇಲಿನ ಸವಕಳಿಯನ್ನು ಹಾಗೂ ವಿನಿಯೋಜನ ವಿನಾಯ್ತಿ ಮೀಸಲನ್ನು ಗಣನೆಗೆ ತೆಗೆದುಕೊಳ್ಳದೆ ಲೆಕ್ಕಿಸಲಾದ ನಷ್ಟ. ಇವನ್ನೂ ಪರಿಗಣಿಸಿ

---

ಬಿ. ಎಸ್. ಚಂದ್ರಶೇಖರ, ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್ ನಗರ ಶಾಖೆ, ಬೆಂಗಳೂರು ೫೬೦ ೦೦೨

ಆಸ್ತಿ ಹೊಣೆ ತಃಖ್ತೆಯಲ್ಲಿ ತೋರಿಸಿರುವ ನಿವ್ವಳ ನಷ್ಟ ಇನ್ನೂ ಹೆಚ್ಚಿನದಾಗಿರುತ್ತದೆ. ಸವಕಳಿಗಾಗಿ ಅವಕಾಶ ಮತ್ತು ತೆರಿಗೆ ವಿನಾಯ್ತಿ ಪಡೆಯುವ ದೃಷ್ಟಿಯಿಂದ ತೆಗೆದಿಟ್ಟ ವಿನಿಯೋಜನ ವಿನಾಯ್ತಿ ಮಿಾಸಲು ಇವುಗಳಿಂದಾಗಿ ಉದ್ಯಮ ವೆಚ್ಚ ಮಾಡಬೇಕಾದ್ದೇನೂ ಇರುವುದಿಲ್ಲವಾದ್ದರಿಂದ ನಿವ್ವಳ ನಷ್ಟದ ಮೊತ್ತವನ್ನು ಗಮನಿಸದೆ ನಗದು ನಷ್ಟವನ್ನು ಮಾತ್ರ ಪರಿಗಣಿಸಿ ಉದ್ಯಮ ಘಟಕವನ್ನು ಅಸ್ವಸ್ಥ ಅಥವಾ ಸ್ವಸ್ಥವೆಂದು ನಿರ್ಧರಿಸಬೇಕಾಗುತ್ತದೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ—ನಿವ್ವಳ ನಷ್ಟ ಅನುಭವಿಸುವ ಉದ್ಯಮವು ನಗದು ನಷ್ಟ ಹೊಂದದಿರಬಹುದಾದರೂ, ಮತ್ತೆ ಮತ್ತೆ ನಿವ್ವಳ ನಷ್ಟ ಹೊಂದುತ್ತ ಹೋಗುವ ಉದ್ಯಮ ಬಹುಬೇಗ ನಗದು ನಷ್ಟವನ್ನು ಎದುರಿಸಬೇಕಾಗುತ್ತದೆ. ಈ ದೃಷ್ಟಿಯಿಂದ ದೀರ್ಘಕಾಲದ ನಿವ್ವಳ ನಷ್ಟವನ್ನೂ ಅಸ್ವಸ್ಥತೆಯ ಲಕ್ಷಣವೆಂದೇ ಪರಿಗಣಿಸಬೇಕಾಗುತ್ತದೆ.

### ಅಸ್ವಸ್ಥತೆಯ ಸೂಚನೆಗಳು

ಅಸ್ವಸ್ಥತೆಯ ವ್ಯಾಖ್ಯೆಯಿಂದ ಉದ್ಯಮ ಘಟಕವೊಂದರ ಸ್ವಾಸ್ಥ್ಯದ ಸ್ಥಿತಿಯ ಬಗೆಗೆ ನಿರ್ಧಾರ ತೆಗೆದುಕೊಳ್ಳುವುದು ಕಷ್ಟವೆನಿಸಬಹುದು. ಇಂಥ ಸಂದರ್ಭಗಳಲ್ಲಿ ಬ್ಯಾಂಕರನು ಆ ಘಟಕದ ಬ್ಯಾಂಕ್ ಖಾತೆಯ ನಿರ್ವಹಣೆ, ವ್ಯವಹಾರದ ಮಟ್ಟ, ಉತ್ಪಾದನೆ, ಹಣಕಾಸು ನಿರ್ವಹಣೆ ಮುಂತಾದವನ್ನು ಗಮನಿಸಿ ಘಟಕವು ಅಸ್ವಸ್ಥವೇ ಅಲ್ಲವೇ ಎಂಬ ಬಗ್ಗೆ ನಿರ್ಧಾರ ಕೈಗೊಳ್ಳಬಹುದು.

ದುಡಿಯುವ ಬಂಡವಾಳ ಖಾತೆಯಲ್ಲಿ ಹೆಚ್ಚಿನ ವಹಿವಾಟುಗಳು ಇಲ್ಲದಿರುವುದು, ಸರಕು ಪಟ್ಟಿಗಳನ್ನು ಸಕಾಲದಲ್ಲಿ/ಸರಿಯಾದ ರೀತಿಯಲ್ಲಿ ಸಲ್ಲಿಸದಿರುವುದು, ಖಾತೆಯಲ್ಲಿ ಹಣ ಎಳೆತದ (ಡ್ರಾಯಿಂಗ್) ಪರಿಮಿತಿಯನ್ನು ಮಿಾರಿದ ಬಾಕಿ, ದರದು ಹುಂಡಿಗಳ ವಟಾವಣೆ, ಅವಧಿ ಸಾಲದ ಕಂತು ಪಾವತಿಯಲ್ಲಿ ವಿಳಂಬ/ಪಾವತಿ ಮಾಡದಿರುವಿಕೆ, ಬ್ಯಾಂಕಿಗೆ ತಿಳಿಸದೆ ಸಿದ್ಧ ಸರಕನ್ನು ಅಥವಾ ಕಚ್ಚಾ ಸಾಮುಗ್ರಿಯನ್ನು ಮಾರುವುದು ಇಂಥ ಹಲವು ಸೂಚನೆಗಳನ್ನು ಬ್ಯಾಂಕರನು ಗಂಭೀರವಾಗಿ ಪರಿಗಣಿಸಬೇಕು.

ಅಂತೆಯೇ, ಉತ್ಪಾದನೆಯ ಅಥವಾ ವಿಕ್ರಯದ ಮಟ್ಟದಲ್ಲಿ ಇಳಿತ, ಘಟಕದ ಉತ್ಪನ್ನಗಳಿಗೆ ಬೇಡಿಕೆ ಇಲ್ಲದಿರುವುದು, ಸಕಾಲದಲ್ಲಿ ಸಿದ್ಧ ಸರಕನ್ನು ತಲುಪಿಸಲು ಸಾಧ್ಯವಾಗದಿರುವುದು. ಉತ್ಪನ್ನದ ಗುಣ ಕುರಿತಾದ ಸಮಸ್ಯೆಗಳು/ಗ್ರಾಹಕರ ದೂರುಗಳು ಇವೂ ಅಸ್ವಸ್ಥತೆಯ ಸೂಚನೆಗಳು.

ಇವಲ್ಲದೆ—ಚಾಲ್ತಿ ಅನುಪಾತದ ಇಳಿತಾಯ, ವಿವಿಧ ಧನಿಗಳ ಏರುತ್ತಿರುವ ಮೊಬಲಗು, ಯಂತ್ರೋಪಕರಣಗಳ ನಿರ್ವಹಣೆಯಲ್ಲಿ ಅದಕ್ಷತೆ, ತಳ್ಳಿಹಾಕಿದ ಉತ್ಪನ್ನಗಳಿಂದ ಉತ್ಪಾದನೆಯಲ್ಲಿ ನಷ್ಟ, ಪದೇಪದೇ ಮುಷ್ಕರಗಳು/ಬೀಗಮುದ್ರೆ ಮತ್ತು ಇಂಥ ಇನ್ನೂ ಹಲವು ನಿಸ್ಸಂದೇಹವಾದ ಸೂಚನೆಗಳನ್ನು ಅಸ್ವಸ್ಥ ಘಟಕಗಳಲ್ಲಿ ಕಾಣಬಹುದು.

### ಮಾಡುವುದೇನು ?

ಉದ್ಯಮ ಘಟಕವೊಂದು ಅಸ್ವಸ್ಥವೆಂದು ನಿರ್ಧರಿಸಿದ ಮೇಲೆ ಅದಕ್ಕೆ ಸಾಲ ನೀಡಿರುವ ಬ್ಯಾಂಕು ಅನುಸರಿಸಬಹುದಾದ ಹಲವು ಮಾರ್ಗಗಳಿವೆ :

1 ಘಟಕವನ್ನು ಸ್ವಾಸ್ಥ್ಯಕ್ಕೆ ಮರಳಿಸುವ ದೃಷ್ಟಿಯಿಂದ ಅವುಗಳ ಶುಶ್ರೂಷೆ.

2 ಒಂದು ಸ್ವಸ್ಥ ಘಟಕದೊಂದಿಗೆ ಅದನ್ನು ವಿಲೀನಗೊಳಿಸಲು ಪ್ರಯತ್ನ.

3 ಸರಕಾರ ಘಟಕವನ್ನು ತೆಗೆದುಕೊಳ್ಳಲು ಶಿಫಾರಸು (ಸಿಮೆಂಟು, ಸಕ್ಕರೆ, ಜವಳಿ ಮುಂತಾದವನ್ನು ಉತ್ಪಾದಿಸುವ ದೊಡ್ಡ ಗಾತ್ರದ ಘಟಕಗಳ ವಿಷಯದಲ್ಲಿ ಇದು ಸಾಧ್ಯ).

4 ತಾನು ನೀಡಿದ ಮುಂಗಡಗಳನ್ನು ವಾಪಸು ಮಾಡುವಂತೆ ಕೇಳುವುದು.

ಈ ಯಾವುದೇ ನಿರ್ಧಾರವನ್ನು ಬ್ಯಾಂಕು ಆದಷ್ಟು ಬೇಗ ತೆಗೆದುಕೊಳ್ಳುವುದು ಉತ್ತಮ. ಘಟಕದ ಆರ್ಥಿಕ ಸ್ಥಿತಿ ದಿನೇದಿನೇ ಉಲ್ಬಣಗೊಳ್ಳುವುದರಿಂದ ನಿರ್ಧಾರವನ್ನು ಮುಂದೂಡುತ್ತಲೇ ಹೋಗುವುದು ಘಟಕಕ್ಕೂ ಬ್ಯಾಂಕಿಗೂ ಶ್ರೇಯಸ್ಕರವಲ್ಲ.

ಎಲ್ಲ ಅಸ್ವಸ್ಥ ಘಟಕಗಳನ್ನೂ ಪುನರುಜ್ಜೀವನ ಮಾಡಲು ಬ್ಯಾಂಕು ಮುಂದಾಗುವುದು ಪ್ರಾಯಶಃ ಅಸಾಧ್ಯ. ಅಸ್ವಸ್ಥತೆಗೆ ಅನೇಕ ಕಾರಣಗಳಿದ್ದು, ಆ ಕಾರಣಗಳನ್ನು ಪರಿಶೀಲಿಸಿದ ಅನಂತರವೇ ಈ ಬಗ್ಗೆ ನಿರ್ಧಾರ ಕೈಗೊಳ್ಳುವುದು ಯುಕ್ತವಾಗುತ್ತದೆ.

### ಕಾರಣಗಳು

ಅಸ್ವಸ್ಥತೆಗೆ ಕಾರಣಗಳು ಹಲವಾರು. ಅವನ್ನು ಆಂತರಿಕ ಹಾಗೂ ಬಾಹ್ಯ ಎಂದು ಎರಡು ಗುಂಪುಗಳನ್ನಾಗಿ ಮಾಡಬಹುದು.

### ಆಂತರಿಕ ಕಾರಣಗಳು

(1) ಘಟಕದ ಕಾರ್ಯನಿರ್ವಹಣೆಯ ಸ್ಥಳದ ತಪ್ಪು ಆಯ್ಕೆ, (2) ಬೇಡಿಕೆಯನ್ನು ಹೆಚ್ಚಾಗಿ ಅಂದಾಜು ಮಾಡುವುದು, (3) ಯೋಜನೆಯನ್ನು ಜಾರಿಗೆ ತರುವುದರಲ್ಲಿ ವಿಳಂಬ (ಇಲ್ಲಿ ಹಣಕಾಸು ಸಂಸ್ಥೆಯ ಪಾತ್ರವೂ ಉಂಟು), (4) ವೆಚ್ಚ ನಿಯಂತ್ರಣವಿಲ್ಲದಿರುವುದು, (5) ಯಂತ್ರೋಪಕರಣಗಳ ದಕ್ಷ ನಿರ್ವಹಣೆಯ ಕೊರತೆ--ಮುಖ್ಯವಾಗಿ ಆಧುನೀಕರಣದ ಸಮಸ್ಯೆ, (6) ದುಡಿಯುವ ಬಂಡವಾಳಕ್ಕಾಗಿ ಒದಗಿರುವ ಹಣದ ದುರುಪಯೋಗ ಅಥವಾ ಘಟಕದ ಕಾರ್ಯನಿರ್ವಹಣೆಗಾಗಿ ಬಳಸಬೇಕಾದ ಹಣವನ್ನು ಬೇರೆಡೆಗೆ ಹರಿಸುವುದು—ಇವು ಅಸ್ವಸ್ಥತೆಯ ಆಂತರಿಕ ಕಾರಣಗಳಲ್ಲಿ ಕೆಲವು.

### ಬಾಹ್ಯ ಕಾರಣಗಳು

(1) ಉತ್ಪಾದನೆ, ದರ ಮತ್ತು ವಿತರಣೆಗೆ ಸಂಬಂಧಿಸಿದಂತೆ ಸರಕಾರದ ಧೋರಣೆ (ಉದಾ : ಪರವಾನಗಿ ನೀಡುವಿಕೆ, ಆಮದು-ರಫ್ತು, ತೆರಿಗೆ, ಕಾರ್ಮಿಕ ಕಾನೂನು ಮುಂತಾದ ವಿಷಯಗಳಲ್ಲಿ ಸರಕಾರದ ಧೋರಣೆ), (2) ಕಚ್ಚಾ ಸಾಮುಗ್ರಿ, ವಿದ್ಯುತ್, ಸಾಗಾಣಿಕೆ ಸೌಲಭ್ಯ ಮುಂತಾದವುಗಳ ಕೊರತೆ, (3) ಬೇಡಿಕೆಯಲ್ಲಿ ಹಿಂಜರಿತ, ಹಣದುಬ್ಬರ ಇತ್ಯಾದಿ. (4) ಕೆಲಸಗಾರರ ಕೊರತೆ/ಆಧಿಕ್ಯ, (5) ಮುಷ್ಕರ/ಬೀಗಮುದ್ರೆ, (6) ಅಗತ್ಯವಾದಷ್ಟು ದುಡಿಯುವ ಬಂಡವಾಳವಿಲ್ಲದಿರುವುದು, (7) ಮಾರುಕಟ್ಟೆಯಲ್ಲಿ ಅತಿಯಾದ ಸ್ಪರ್ಧೆ—ಇವು ಅಸ್ವಸ್ಥತೆಗೆ ಕೆಲವು ಬಾಹ್ಯ ಕಾರಣಗಳು.

ಸಣ್ಣ ಕೈಗಾರಿಕಾ ಘಟಕಗಳಲ್ಲಿ ವ್ಯವಸ್ಥಾಪನ ಹಾಗೂ ತಾಂತ್ರಿಕ

ಜ್ಞಾನದ ಅಭಾವ, ದೊಡ್ಡ ಕೈಗಾರಿಕೆಗಳಿಂದ ಉತ್ಪನ್ನಗಳಿಗೆ ಬೇಡಿಕೆಯು ಇಳಿತಾಯ, ಇವಲ್ಲದೆ ಸರಕಾರಿ ಇಲಾಖೆಗಳಿಗೆ/ದೊಡ್ಡ ಕೈಗಾರಿಕೆಗಳಿಗೆ ಪೂರೈಸಿದ ಸರಕಿನ ಹಣ ಪಾವತಿಯಲ್ಲಿ ವಿಳಂಬ ಇವು ಹಲವು ಮುಖ್ಯ ಕಾರಣಗಳೆಂದು ಸರ್ವೇಕ್ಷಣಗಳಿಂದ ತಿಳಿದು ಬಂದಿದೆ.

ಉದರಿ ನಿಯಂತ್ರಣ ಅತಿಯಾದಾಗ ಸಣ್ಣ ಘಟಕಗಳ ಸಮಸ್ಯೆಗಳು ಹೆಚ್ಚುತ್ತವೆ. ಉದರಿಯ ದರ ಏರುತ್ತದೆ, ದೊಡ್ಡ ಘಟಕಗಳಿಂದ ಬೇಡಿಕೆ ಕಡಮೆಯಾಗಿ ಉತ್ಪಾದನೆಯಲ್ಲಿ ಕಡಿತ ಅನಿವಾರ್ಯವಾಗಿ ಕಚ್ಚಾ ಸಾಮಗ್ರಿ ಸರಕು ಶೇಖರಗೊಳ್ಳುತ್ತವೆ. ಸಮಸ್ಥಿ ಬಿಂದುವಿಗಿಂತ (Break-even Point) ಕಡಮೆ ಮಟ್ಟದಲ್ಲಿ ಉತ್ಪಾದನೆ ಮುಂದುವರಿಯುವುದರಿಂದ ಸಹಜವಾಗಿಯೇ ನಷ್ಟವು ಏರುತ್ತ ಹೋಗುತ್ತದೆ.

## ಪುನರುಜ್ಜೀವನ

ಘಟಕವೊಂದು ಸ್ವಸ್ಥವಾಗಿರುವುದೆಂದರೆ ಆಂತರಿಕ ಹೆಚ್ಚಳ ನಿರಂತರವಾಗಿ ಉತ್ಪಾದಿಸುವ ಸ್ಥಿತಿಯಲ್ಲಿರುವುದೇ ಆಗಿದೆ. ಅಸ್ವಸ್ಥ ಘಟಕವೊಂದನ್ನು ಮರಳಿ ಸ್ವಾಸ್ಥ್ಯಕ್ಕೆ ತರುವುದೇ ಪುನರುಜ್ಜೀವನ. ನಿರಂತರವಾಗಿ ನಷ್ಟ ಅನುಭವಿಸುತ್ತಿರುವ ಉದ್ಯಮವೊಂದು ಸ್ವಾಸ್ಥ್ಯಕ್ಕೆ ಮರಳಬೇಕೆಂದು ಅದರ ಸ್ಥಾಪಕರು, ಅದಕ್ಕೆ ಹಣಕಾಸು ನೆರವು ನೀಡಿರುವ ಸಂಸ್ಥೆ ಹಾಗೂ ಇತರ ಸಾಲಿಗರು, ಆ ಉದ್ಯಮದಲ್ಲಿ ಕೆಲಸ ಮಾಡುತ್ತಿರುವ ಉದ್ಯೋಗಿಗಳು—ಮುಂತಾದ ಅನೇಕರು ಆಶಿಸುವುದು ಸಹಜವಾಗಿಯೇ ಇದೆ. ಅಲ್ಲದೆ ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರಗಳೂ ಅಸ್ವಸ್ಥ ಕೈಗಾರಿಕಾ ಘಟಕಗಳ ಪುನರುಜ್ಜೀವನದಲ್ಲಿ ಆಸಕ್ತಿಯನ್ನು ಹೊಂದಿದ್ದು ಕೇಂದ್ರ ಸರಕಾರವು ಈ ಉದ್ದೇಶದಿಂದ ಭಾರತದ ಕೈಗಾರಿಕಾ ಪುನರ್ನಿರ್ಮಾಣ ನಿಗಮ ಎಂಬ ವ್ಯವಸ್ಥಾಪನ ಹಾಗೂ ಹಣಕಾಸು ಸಂಸ್ಥೆಯೊಂದನ್ನು ಸ್ಥಾಪಿಸಿದೆ.

ಆದರೆ ಈವರೆಗೆ ಸಂಸ್ಥೆಯು ಅಸ್ವಸ್ಥ ಘಟಕಗಳಿಗೆ ನೀಡಿರುವ ನೆರವು ಅಲ್ಪ ಪ್ರಮಾಣದ್ದಾಗಿದ್ದು, ಸಂಸ್ಥೆಯ ಅಸ್ತಿತ್ವ ಮತ್ತು ಉಪಯುಕ್ತತೆಯನ್ನು ಸಮರ್ಥಿಸಲು ಸಾಧ್ಯವಾಗುವ ಮಟ್ಟಿಗಾದರೂ ಇದು ಕಾರ್ಯಪ್ರವೃತ್ತವಾಗಬೇಕೆಂಬುದು ಉದ್ಯಮಿಗಳ ಆಶಯ.

## ಪುನರುಜ್ಜೀವನ ಯಾವಾಗ ?

ಬ್ಯಾಂಕಿನ ಮೇಲೆ ಬೀಳುವ ಹೊರೆಯನ್ನು ಗಣನೆಗೆ ತೆಗೆದುಕೊಳ್ಳದೆ ಪುನರುಜ್ಜೀವನ ಕಾರ್ಯಕ್ರಮ ಹಾಕಿಕೊಳ್ಳುವುದು ಸರಿಯಲ್ಲ. ಎಲ್ಲಾ ಸಂದರ್ಭಗಳಲ್ಲೂ ಅಸ್ವಸ್ಥ ಘಟಕಗಳ ಶುಶ್ರೂಷೆ (nursing) ಮಾಡಲು ಹೊರಡುವುದು ವ್ಯಾವಹಾರಿಕವೂ ಅಲ್ಲ, ನ್ಯಾಯವೂ ಅಲ್ಲ. ಈ ವಿಷಯದಲ್ಲಿ ಉದ್ಯೋಗಾವಕಾಶಗಳನ್ನು ಸಂರಕ್ಷಿಸುವುದೊಂದೇ ಉದ್ದೇಶವಲ್ಲವೆಂಬುದು ನಿಸ್ಸಂದೇಹ.

ಶುಶ್ರೂಷೆ ಕಾರ್ಯಕ್ರಮದ ಫಲಾನುಭವಿ ಘಟಕದ ದೀರ್ಘಕಾಲಿಕ ಜೀವಂತಿಕೆ(long-term viability)ಯನ್ನು ವಾಸ್ತವ ದೃಷ್ಟಿಯಿಂದ ನಿರ್ಧರಿಸಬೇಕಾದುದು ಬ್ಯಾಂಕರನ ಆದ್ಯ ಕರ್ತವ್ಯ. ಸಂಶಯಾತೀತವಾಗಿ ದೀರ್ಘಕಾಲಿಕ ಜೀವಂತಿಕೆಯ ಭರವಸೆ ಮೂಡಿಸುವಂಥ ಉದ್ಯಮ ಘಟಕಗಳನ್ನು ಮತ್ತು ಅಂಥವನ್ನು ಮಾತ್ರವೇ ಶುಶ್ರೂಷೆ ಮಾಡಬೇಕು.

ಈ ವಿಷಯದಲ್ಲಿ ಬ್ಯಾಂಕುಗಳ ಹಾಗೂ ಅವಧಿ ಸಾಲ ಸಂಸ್ಥೆಗಳ ಸ್ಥಾಯಿ ಸಮನ್ವಯ ಸಮಿತಿಯ ದೃಷ್ಟಿ ಅತ್ಯಂತ ಸಮಂಜಸವಾಗಿದ್ದು, ಎಲ್ಲ ಹಣಕಾಸು ಸಂಸ್ಥೆಗಳೂ ಇದನ್ನು ಮನನ ಮಾಡಬೇಕಾಗಿದೆ :

ರಿಯಾಯ್ತಿಯದಾದರೂ ಒಂದು ಸಮಂಜಸವಾದ ಬಡ್ಡಿದರದಲ್ಲಿ—ಏನೇ ಆದರೂ ಬ್ಯಾಂಕಿನ ನಿಧಿಯ ವೆಚ್ಚಕ್ಕಿಂತ ಕಡಮೆಯಲ್ಲದ ಒಂದು ದರದಲ್ಲಿ—ಘಟಕವು ತನ್ನ ಎಲ್ಲ ಸಾಲಗಳನ್ನೂ 8-10 ವರ್ಷಗಳೊಳಗೆ ತೀರಿಸುವ ಸ್ಥಿತಿಯಲ್ಲಿರುವ ಘಟಕವನ್ನು 'ಜೀವಂತಿಕೆ' ಹೊಂದಿರುವ ಘಟಕವೆಂದು ಪರಿಗಣಿಸಬೇಕು.

## ಶುಶ್ರೂಷೆ ಹೇಗೆ ?

ಮೇಲೆ ಹೇಳಿದ ಮಾನದಂಡದಿಂದ ಪುನರುಜ್ಜೀವನಗೊಳಿಸುವ ನಿರ್ಧಾರ ಕೈಗೊಂಡನಂತರ ಬ್ಯಾಂಕುಗಳು ತಮ್ಮ ಶುಶ್ರೂಷೆ ಕಾರ್ಯಕ್ರಮದಲ್ಲಿ ಮುಖ್ಯವಾಗಿ ಎರಡು ರೀತಿಯ ನೆರವು ನೀಡಬಹುದು :

1 ಅಸ್ತಿತ್ವದಲ್ಲಿರುವ ಮುಂಗಡಗಳ ಮೇಲಿನ ಬಡ್ಡಿಯನ್ನು ಮನ್ನಾ ಮಾಡುವುದು ಅಥವಾ ಕಡಿಮೆ ಮಾಡುವುದು.

2 ರಿಯಾಯಿತಿ ದರದ ಬಡ್ಡಿಯಲ್ಲಿ ಘಟಕದ ಪುನರುಜ್ಜೀವನಕ್ಕೆ ಅಗತ್ಯವಾದ ಹೊಸ ಮುಂಗಡಗಳನ್ನು ನೀಡುವುದು.

ಇದರ ಜತೆಗೆ ಅಗತ್ಯವಾದಲ್ಲಿ ಉದ್ಯಮಿಯ ಭಾಗಾಂಶದ (margin) ಪ್ರಮಾಣವನ್ನು ಕಡಮೆ ಮಾಡಬಹುದು ; ಬಡ್ಡಿಯನ್ನು ನಿಧೀಕರಿಸಬಹುದು (funding)—ಎಂದರೆ ಸಂಚಯಿತ ಬಡ್ಡಿಯ ಮೊತ್ತವನ್ನು ಬೇರ್ಪಡಿಸಿ ಘಟಕದ ಲಾಭಪ್ರದತೆ ಅನುಕೂಲಕರವಾದಾಗ ಕಂತುಗಳಲ್ಲಿ ಅದನ್ನು ಪಾವತಿ ಮಾಡಲು ಅನುವು ಮಾಡಿಕೊಡುವುದು ; ದೀರ್ಘಕಾಲಿಕ ಸಾಲಗಳ ಪಾವತಿಗೆ ಸುಲಭ ಕಂತುಗಳನ್ನು ನಿಗದಿ ಮಾಡಬಹುದು.

ಈ ನೆರವು ನೀಡುವುದಕ್ಕೆ ಪೂರ್ವಭಾವಿಯಾಗಿ ಬ್ಯಾಂಕು ಹಲವು ವಿಷಯಗಳನ್ನು ಪರ್ಯಾಲೋಚಿಸಬೇಕಾಗುತ್ತದೆ.

1 ಅಸ್ವಸ್ಥತೆಗೆ ನಿಜವಾದ ಕಾರಣವನ್ನು ಕಂಡುಕೊಳ್ಳುವುದು. ಇಲ್ಲಿ ಅಗತ್ಯವಾದರೆ ಬ್ಯಾಂಕಿನ ತಾಂತ್ರಿಕ ಸಿಬ್ಬಂದಿಯ ಅಥವಾ ಹೊರಗಿನ ಸೇವಾ ಸಲಹೆ ಸಂಸ್ಥೆಗಳ ನೆರವು ಪಡೆಯಬಹುದು.

2 ಉದ್ಯಮದಲ್ಲಿ ವ್ಯವಸ್ಥಾಪನದ ಕೊರತೆಯಿದ್ದರೆ ಉದ್ಯಮದಾರರು ವೃತ್ತಿಪರರ ನೆರವಿನಿಂದ ಅದನ್ನು ತುಂಬಿಕೊಳ್ಳುವಂತೆ ನೋಡಿಕೊಳ್ಳುವುದು.

3 ಬ್ಯಾಂಕಿಗೆ ಅಡಮಾನವಾದ ಆಸ್ತಿಗಳ ಮೌಲ್ಯನಿರ್ಧಾರಣವಾಗಬೇಕು. ಆಸ್ತಿಗಳ ಪುಸ್ತಕ ಮೌಲ್ಯಕ್ಕೂ ಮಾರುಕಟ್ಟೆ ಬೆಲೆಗೂ ಅಂತರ ಅಧಿಕವಾದಾಗ ಈ ಕ್ರಮ ಅಗತ್ಯವಾಗುತ್ತದೆ.

4 ಘಟಕದ ಪ್ರಸಕ್ತ ಹಣಕಾಸು ಸ್ಥಿತಿಯ ಮಾಹಿತಿ ಪಡೆಯಲು ಅದರ ಇತ್ತೀಚಿನ ಆಸ್ತಿ-ಹೊಣೆ ತಃಖ್ತೆ ಮತ್ತಿತರ ಮಾಹಿತಿಯನ್ನು ತರಿಸಿ ಅವುಗಳನ್ನು ಕೂಲಂಕಷವಾಗಿ ಗಮನಿಸಿ ಕುಂದುಕೊರತೆಗಳನ್ನು ಕಂಡುಕೊಳ್ಳಬೇಕು. ಉದಾ : ಋಣ ಬಂಡವಾಳ ಅನುಪಾತ 1 : 1 ಕ್ಕಿಂತ ತುಂಬಾ ಕಡಮೆಯಿದೆಯೇ ? ನಿವ್ವಳ ಬಂಡವಾಳ ಕೊರತೆ ಎಷ್ಟು ? ಸ್ಥಿರಾಸ್ತಿಗಳಲ್ಲಿ ಅಧಿಕ ವಿನಿಯೋಜನೆಯಾಗಿದೆಯೇ ? ಸರಕಿನ ದಾಸ್ತಾನು ಕ್ರಮಬದ್ಧವಾಗಿದೆಯೇ ? ಸಾಲಗಾರರಿಂದ ಬರಬೇಕಾದ ಬಾಕಿ ಹಣ ಎಷ್ಟು ಹಳೆಯದು ?—ಇತ್ಯಾದಿ.

**5** ಘಟಕದ ಪುನರುಜ್ಜೀವನಕಾರ್ಯಕ್ಕೆ ಉದ್ಯಮದಾರ ಬೇರೆ ಯಾವ ಮೂಲಗಳಿಂದ ಹಣ ಪೂರೈಸಬಹುದೆಂಬ ವಿಷಯ ಬಹು ಮುಖ್ಯ. ಉದ್ಯಮಿಯ ಸ್ವಂತ ಹಣ, ಅವನ ಬಂಧುಮಿತ್ರರಿಂದ ಸಾಲ, ವ್ಯವಹಾರ ಋಣ ಮತ್ತು ಇತರ ಮೂಲಗಳಿಂದ ಸಾಧ್ಯವಾದಷ್ಟು ನೆರವು ಕೂಡಿಸಿದ ಮೇಲೆ ಉಳಿಯುವ ಕೊರತೆಯನ್ನು ಬ್ಯಾಂಕು ಪೂರೈಸಲು ಮುಂದಾಗಬಹುದು. ಸಾಧ್ಯವಿದ್ದಲ್ಲಿ ಸ್ಥಿರಾಸ್ತಿಗಳ ಸಾಮ್ಯ ಅಡಮಾನ ಪಡೆದು ತಾನು ನೀಡುವ ಸಾಲಗಳನ್ನು ಭದ್ರಗೊಳಿಸಿಕೊಳ್ಳುವುದು ವ್ಯಾವಹಾರಿಕ ಬ್ಯಾಂಕರನ ಲಕ್ಷಣ. ಘಟಕ ಅಸ್ವಸ್ಥವಾಗಿದ್ದು ಅದಕ್ಕೆ ಪೂರೈಸಬೇಕಾಗುವ ನೆರವು ಸಾಮಾನ್ಯ ಸಂದರ್ಭಗಳಲ್ಲಿಗಿಂತ ಅಧಿಕವಾಗಿರುವುದರಿಂದ ಬ್ಯಾಂಕರನ ಈ ದೃಷ್ಟಿ ಅಸಮರ್ಥನೀಯವಾಗುವುದಿಲ್ಲ.

ಹೀಗೆ ಪರ್ಯಾಲೋಚಿಸಿದ ಅನಂತರ ತಾನು ನೀಡುವ ನೆರವನ್ನು ಘಟಕ ಸರಿಯಾಗಿ ಉಪಯೋಗಿಸಿಕೊಳ್ಳುತ್ತಿದೆಯೆಂಬುದನ್ನು ಖಚಿತಪಡಿಸಿಕೊಳ್ಳಬೇಕಾದ್ದು ಬ್ಯಾಂಕಿನ ಹೊಣೆ.

'ಪುನರುಜ್ಜೀವನ'ದ ಜವಾಬ್ದಾರಿ ಬ್ಯಾಂಕರನೊಬ್ಬನದೇ ಅಲ್ಲ; ಉದ್ಯಮ ಘಟಕದ್ದೂ ಹೌದು. ಫಲಾನುಭವಿ ಘಟಕದ ಸಂಪೂರ್ಣ ಸಹಕಾರ ಇಲ್ಲದಿದ್ದರೆ ಪುನರುಜ್ಜೀವನ ಕಾರ್ಯಕ್ರಮ ವಿಫಲವಾಗುವುದು ಖಂಡಿತ. ದಾಸ್ತಾನು ಶೇಖರಣೆಯಲ್ಲಿ, ಖಾತೆಯ ನಿರ್ವಹಣೆಯಲ್ಲಿ, ವ್ಯವಸ್ಥಾಪನದಲ್ಲಿ ಬ್ಯಾಂಕರ್ ನಿರೀಕ್ಷಿಸುವ ಶಿಸ್ತನ್ನು ಪಾಲಿಸಿ ಘಟಕವು ಪುನರುಜ್ಜೀವನ ಕಾರ್ಯಕ್ರಮದಲ್ಲಿ ಸಂಪೂರ್ಣವಾಗಿ ಸಹಕರಿಸಬೇಕು. ಇಂಥ ಸಹಕಾರದ ನಿರೀಕ್ಷೆಯಿಲ್ಲದಿದ್ದರೆ ಶುಶ್ರೂಷೆ ಕಾರ್ಯಕ್ರಮವನ್ನು ಬ್ಯಾಂಕು ಆರಂಭಿಸಲೇಕೂಡದು.

### ಇತರ ನೆರವು

ಹೆಚ್ಚುವರಿ ಹಣಕಾಸು ನೆರವು ನೀಡುವುದಲ್ಲದೆ ಇತರ ರೀತಿಗಳಲ್ಲೂ ಬ್ಯಾಂಕುಗಳು ಅಸ್ವಸ್ಥ ಘಟಕಗಳಿಗೆ ನೆರವಾಗಬಹುದು. ವಿದ್ಯುಚ್ಛಕ್ತಿ ಮಂಡಳಿ, ಭವಿಷ್ಯನಿಧಿ, ಇವೇ ಮುಂತಾದ ಸಂಸ್ಥೆಗಳಿಗೆ ಉದ್ಯಮ ಘಟಕವು ನೀಡಬೇಕಾಗಿರುವ ಬಾಕಿಯನ್ನು ತಕ್ಷಣ ಪಾವತಿ ಮಾಡಲು ಒತ್ತಾಯಿಸಬಾರದೆಂದು ಸಂಬಂಧಿಸಿದ ಸಂಸ್ಥೆಗಳ ಮನವೊಲಿಸುವುದು, ಉತ್ಪನ್ನಗಳ ಮಾರಾಟಗಾರಿಕೆಯಲ್ಲಿ ಸಲಹೆ ನೀಡುವುದು, ಸಾಧ್ಯವಾದರೆ ನೆರವಾಗುವುದು. ಉತ್ಪನ್ನಗಳನ್ನು ಕೊಳ್ಳುವಂತೆ ಸರಕಾರ ತನ್ನ ಇಲಾಖೆಗಳಿಗೆ ಆದೇಶ ನೀಡುವಂತೆ ಶಿಫಾರಸು ಮಾಡುವುದು. (ಭಾರಿ ಉದ್ಯಮಗಳ ವಿಷಯದಲ್ಲಿ ಹೀಗೆ ಮಾಡಬಹುದು). ದೊಡ್ಡ ಕೈಗಾರಿಕಾ ಘಟಕಗಳು ಪಾವತಿ ಮಾಡಬೇಕಾದ ಮೊತ್ತವನ್ನು ಅವು ಆದಷ್ಟು ಬೇಗ ನೀಡುವಂತೆ ಒತ್ತಾಯ ಮಾಡುವುದು. ದಾಸ್ತಾನು ಶೇಖರಣೆ, ಉತ್ಪಾದನೆ ಅಥವಾ ಬ್ಯಾಂಕ್ ಖಾತೆಯ ನಿರ್ವಹಣೆಯಲ್ಲಿ ಕಂಡುಬರುವ ಅನಿಷ್ಟಕರ ಲಕ್ಷಣಗಳನ್ನು ಉದ್ಯಮಿಯ ಗಮನಕ್ಕೆ ತಂದು ತಕ್ಷಣ ಪರಿಹಾರೋಪಾಯ ಕಂಡುಕೊಳ್ಳುವಂತೆ ಒತ್ತಾಯ ಹೇರುವುದು—ಇಂಥ ಕ್ರಮಗಳು ಉಭಯ ಕಕ್ಷಿಗಳಿಗೂ ಲಾಭದಾಯಕವಾಗಿ ಪರಿಣಮಿಸುತ್ತವೆ.

### ನಿರ್ದೇಶಕರ ನೇಮಕ

ಶುಶ್ರೂಷೆ ಕಾರ್ಯಕ್ರಮಕ್ಕೆ ಒಳಪಟ್ಟ ಉದ್ಯಮ ಘಟಕವೊಂದು ಮತ್ತೆ ಅಸ್ವಸ್ಥತೆಯತ್ತ ಓಲತೊಡಗಿದಾಗ ಬ್ಯಾಂಕು ಮತ್ತು ಘಟಕದ ನಡುವಣ ಸಂವಹನದಲ್ಲಿ ಅಂತರವೇರ್ಪಡುವುದು ಸಾಮಾನ್ಯ ಸಂಗತಿಯಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ಸರಿಯಾದ ಮಾಹಿತಿಯನ್ನು ಬ್ಯಾಂಕಿಗೆ ಒದಗಿಸಿದರೆ ಉದ್ಯಮದ ದುಃಸ್ಥಿತಿಯ ಬಗ್ಗೆ ತಿಳಿದು ಸಾಲವಸೂಲಿಗಾಗಿ ಒತ್ತಡ ಬರಬಹುದೆಂಬ ಈ ಭೀತಿಯನ್ನು ನಿವಾರಿಸಿ ಆದಷ್ಟು ಮಾಹಿತಿಯನ್ನು ಪಡೆಯಲು ಬ್ಯಾಂಕರ್ ಯತ್ನಿಸಬೇಕಾಗುತ್ತದೆ.

ದೊಡ್ಡಗಾತ್ರದ ಘಟಕಗಳ ಸಂಬಂಧದಲ್ಲಿ ಈ ಸಮಸ್ಯೆಗೆ ಇನ್ನೊಂದು ಪರಿಹಾರವೂ ಇದೆ. ಐ.ಡಿ.ಬಿ ಐ, ಐ.ಎಫ್.ಸಿ.ಐ. ಐ.ಸಿ.ಐ.ಸಿ.ಐ. ಮುಂತಾದ ಹಲವು ಹಣಕಾಸು ಸಂಸ್ಥೆಗಳು ಕಂಪನಿಯೊಂದರ ಕಾರ್ಯಕ್ರಮ ಕೈಗೊಂಡ ಕೂಡಲೇ ತಮ್ಮ ಪ್ರತಿನಿಧಿಯೊಬ್ಬನನ್ನು ನಿರ್ದೇಶಕರ ಮಂಡಲಿಯಲ್ಲಿ ನೇಮಿಸುತ್ತದೆ. ಕಂಪನಿಯ ಚಟುವಟಿಕೆಗಳು ಉತ್ಪಾದನೆಯ ಮಟ್ಟ ಮತ್ತಿತರ ವಿಷಯಗಳನ್ನು ಕುರಿತ ಮಾಹಿತಿ ಈ ಪ್ರತಿನಿಧಿಯ ಮೂಲಕ ಸಂಸ್ಥೆಗೆ ತಿಳಿಯುವಂತಾಗುತ್ತದೆ.

ಆದರೆ ಬ್ಯಾಂಕುಗಳು ತಮ್ಮ ಪ್ರತಿನಿಧಿಯನ್ನು ನಿರ್ದೇಶಕರ ಮಂಡಲಿಯಲ್ಲಿ ನೇಮಿಸಿದಾಗ ಕಾನೂನಿನ ತೊಡಕೊಂದು ಉದ್ಭವಿಸುತ್ತದೆ. ಕಂಪನಿಯ ವಿವಿಧ ಲೋಪ ಮತ್ತು ದೋಷಗಳಿಗಾಗಿ ಕಂಪನಿಯ ನಿರ್ದೇಶಕನಾಗಿ ಆ ಪ್ರತಿನಿಧಿ ಹೊರಗಿನವರಿಗೆ ಹಾಗೂ ಸರಕಾರಕ್ಕೆ ಹೊಣೆಗಾರನಾಗುತ್ತಾನೆ. ಈ ವಿಷಯದಲ್ಲಿ ಐ.ಡಿ.ಬಿ.ಐ ಅಧಿನಿಯಮ, ಐ.ಎಫ್.ಸಿ.ಐ. ಅಧಿನಿಯಮಗಳಲ್ಲಿ ಸಂಸ್ಥೆಯನ್ನು ಪ್ರತಿನಿಧಿಸುವ ನಿರ್ದೇಶಕರಿಗೆ ನೀಡಲಾಗಿರುವ ಹಲವು ವಿನಾಯ್ತಿಗಳು ಬ್ಯಾಂಕುಗಳಿಗೂ ಅನ್ವಯವಾಗಬೇಕೆಂಬ ಸಲಹೆ ಇನ್ನೂ ಕಾರ್ಯಗತವಾಗಬೇಕಾಗಿದೆ.

### ಪುನರುಜ್ಜೀವನದ ಪ್ರಯೋಜನಗಳು

ಪುನರುಜ್ಜೀವನದಿಂದ ಉದ್ಯಮದ ಒಡೆಯರಿಗೆ ಮತ್ತು ಉದ್ಯೋಗಿಗಳಿಗೆ ಉಂಟಾಗುವ ಲಾಭ ಸ್ವಯಂವೇದ್ಯವಾಗಿಯೇ ಇದೆ. ಇನ್ನು ದೇಶಕ್ಕೆ ಅಧಿಕ ಉತ್ಪಾದನೆಯ ಲಾಭವಿರುವುದೂ ಸ್ಪಷ್ಟವಾಗಿದೆ. ಬ್ಯಾಂಕ್ ಅಥವಾ ಹಣಕಾಸು ಸಂಸ್ಥೆಗಳಿಗೆ ಸಾಲ ವಸೂಲು ಮಾಡುವ ಕಷ್ಟ ತಪ್ಪುವುದೇ ಪುನರುಜ್ಜೀವನದ ಮುಖ್ಯ ಪ್ರಯೋಜನವಾಗಿದೆ. ಕೆಟ್ಟ ಸಾಲವೆಂದು ವಜಾ ಮಾಡಬೇಕಾದ ಮೊತ್ತ ಕಡಮೆಯಾದಷ್ಟೂ ಲಾಭ ತಾನೆ ?

### ಇತರ ಕ್ರಮಗಳು

ಪುನರುಜ್ಜೀವನ ಯಶಸ್ವಿಯಾದರೆ ಹಣಕಾಸು ಸಂಸ್ಥೆಯೊಂದಕ್ಕೆ ಲಾಭವುಂಟಾಗುವುದು ಸತ್ಯವಾದರೂ, ಮೊದಲೇ ಹೇಳಿದಂತೆ ಎಲ್ಲ ಅಸ್ವಸ್ಥ ಘಟಕಗಳನ್ನೂ ಪುನರುಜ್ಜೀವನಗೊಳಿಸಲು ಪ್ರಯತ್ನಿಸುವುದು ಯುಕ್ತವಲ್ಲ. ಈ ನಿಟ್ಟಿನಲ್ಲಿ ಅಧ್ಯಯನ ತಂಡವ ಶಿಫಾರಸಿನಂತೆ ಪುನರುಜ್ಜೀವನಕ್ಕೆ ಅಸ್ವಸ್ಥ ಘಟಕಗಳನ್ನು ಆರಿಸಿಕೊಂಡು, ಉಳಿದ ಅಸ್ವಸ್ಥ ಘಟಕಗಳ ವಿಷಯದಲ್ಲಿ ಬೇರೆ ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವುಗಳಲ್ಲಿ ಕೆಲವನ್ನು ಮಾತ್ರ ಸ್ಥೂಲವಾಗಿ ನೋಡಬಹುದು :

**1** ಸರಕಾರ ಘಟಕವನ್ನು ತೆಗೆದುಕೊಳ್ಳುವುದು. ರಸಗೊಬ್ಬರ, ಉಕ್ಕು, ಸಿಮೆಂಟ್ ಮುಂತಾದುವನ್ನು ಉತ್ಪಾದಿಸುವ ದೊಡ್ಡ ಗಾತ್ರದ ಘಟಕಗಳಾದರೆ ಅವುಗಳ ಆಸ್ತಿ ಹೊಣೆಗಳನ್ನು ಸರಕಾರವೇ ತೆಗೆದುಕೊಳ್ಳುವಂತೆ ಶಿಫಾರಸು ಮಾಡಬಹುದು. ಆದರೆ ಈ ವಿಷಯದಲ್ಲಿ ಬ್ಯಾಂಕುಗಳ ಅನುಭವ ಕಹಿಯಾಗಿದೆ, ಕೈಗಾರಿಕೆಗಳ

(ಅಭಿವೃದ್ಧಿ ಮತ್ತು ನಿಯಮನ) ಅಧಿನಿಯಮದ ಅಡಿಯಲ್ಲಿ 106 ಜವಳಿ ಗಿರಣಿಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ಈ ಜವಳಿ ಗಿರಣಿಗಳ ಆಸ್ತಿಗಳನ್ನು ಸರಕಾರ ತೆಗೆದುಕೊಂಡಿತಾದರೂ ಹೊಣೆಗಳನ್ನು ತೆಗೆದುಕೊಳ್ಳದೆ ಆ ಗಿರಣಿಗಳಿಗೆ ಹಣಕಾಸು ನೆರವು ನೀಡಿದ ಬ್ಯಾಂಕುಗಳಿಗೆ ಬರಬೇಕಾದ ಸಾಲದ ಬಾಕಿ ಹಾಗೆಯೇ ಉಳಿದದ್ದಲ್ಲದೆ, ಯಂತ್ರೋಪಕರಣಗಳ ಭದ್ರತೆಯೂ ಸರಕಾರದ ಪಾಲಾಯಿತು. ಆದರೆ ಇನ್ನು ಮುಂದೆ ಹೀಗಾಗದೆಂದೂ, ಅಸ್ವಸ್ಥ ಘಟಕಗಳನ್ನು ಸರಕಾರ ತೆಗೆದುಕೊಂಡಾಗ ಆನುಷಂಗಿಕ ಭದ್ರತೆಯನ್ನು ಹೊಂದಿರುವ ಸಾಲಗಳನ್ನೂ (ಲಭ್ಯವಿರುವ ಆನುಷಂಗಿಕ ಭದ್ರತೆಯ ಮೌಲ್ಯದಷ್ಟು ಮೊತ್ತಕ್ಕೆ ಸಮನಾಗಿ) ತೆಗೆದುಕೊಳ್ಳುವುದಾಗಿ ಭರವಸೆ ನೀಡಿದೆ.

ಸರಕಾರವಲ್ಲದೆ ಅನ್ಯ ಸಂಸ್ಥೆಗಳು ಅಥವಾ ವ್ಯಕ್ತಿಗಳು ಘಟಕದ ಆಸ್ತಿ ಹೊಣೆಗಳನ್ನು ತೆಗೆದುಕೊಳ್ಳಲು ಮುಂದೆ ಬಂದರೆ ಆ ಬಗ್ಗೆ ಘಟಕದೊಡನೆ ಸಮಾಲೋಚಿಸಿ ನಿರ್ಧಾರ ತೆಗೆದುಕೊಳ್ಳಬಹುದು.

2 ವಿಲೀನ : ಉದ್ಯಮ ಘಟಕವೊಂದು ಅಸ್ವಸ್ಥವಾಗಿದ್ದಾಗ ಅದನ್ನು ಸ್ವಸ್ಥ ಘಟಕವೊಂದರೊಡನೆ ವಿಲೀನಗೊಳಿಸುವ ಸಾಧ್ಯತೆಗಳನ್ನು ಉದ್ಯಮದಾರರೊಡನೆ ಚರ್ಚಿಸಿ ಪರಿಶೀಲಿಸಬಹುದು. 100 ಮಂದಿ ಉದ್ಯೋಗಿಗಳುಳ್ಳ ಅಥವಾ ಸ್ಥಿರಾಸ್ತಿಗಳಲ್ಲಿ 50 ಲಕ್ಷ ರೂ.ಗಿಂತ ಹೆಚ್ಚು ಹೂಡಿಕೆಯಿರುವ ದೊಡ್ಡ ಗಾತ್ರದ ಘಟಕವಾದರೆ ಆದಾಯ ತೆರಿಗೆ ಅಧಿನಿಯಮದ 72(ಎ) ಪ್ರಕರಣದಡಿ ಕೂಡಿ ಬಂದ ಸಾಲದ ಮೊತ್ತಕ್ಕೆ ತೆರಿಗೆ ವಿನಾಯಿತಿಯುಂಟು.

3 ಅವಸಾಯನ : ಘಟಕದ ಆಸ್ತಿಗಳನ್ನು ವಿಲೆ ಮಾಡಿ ಬಂದ ಹಣದಿಂದ ಅದರ ಹೊಣೆಗಳನ್ನು ತೀರಿಸುವ ಕ್ರಮ ಕೈಗೊಂಡು ಘಟಕವನ್ನು ಮುಚ್ಚಿಸುವುದು.

ಮರುಪಾವತಿ ಮಾಡಲು ಕರೆ : ಬೇರೆ ಕ್ರಮಗಳು ಸಾಧ್ಯವಿಲ್ಲದಿದ್ದಲ್ಲಿ ಸಾಲ ಮರುಪಾವತಿ ಮಾಡಲು ಅನಿವಾರ್ಯವಾಗಿ ಕರೆ ನೀಡಬೇಕಾಗುತ್ತದೆ. ಈ ವಿಷಯದಲ್ಲಿ ನಿರ್ಧಾರವನ್ನು ಮುಂದೂಡುತ್ತ ಹೋಗುವುದರಲ್ಲಿ ಅರ್ಥವಿಲ್ಲ. ಸಾಲ ಮರುಪಾವತಿಯಾಗದಿದ್ದಲ್ಲಿ ಕಾನೂನು ಕ್ರಮ ಕೈಗೊಳ್ಳಬೇಕು. ಬೇರೆ ಬ್ಯಾಂಕುಗಳು ನಿರ್ದಾಕ್ಷಿಣ್ಯವಾಗಿ ಹಾಗೆ ಮಾಡಬೇಕಾಗುತ್ತದೆ.

### ಸಲಹೆಗಳು

ಇಷ್ಟೆಲ್ಲಾ ಹೇಳಿದ ಮೇಲೆ, ಬ್ಯಾಂಕುಗಳು/ಹಣಕಾಸು ಸಂಸ್ಥೆಗಳು ಅಸ್ವಸ್ಥ ಘಟಕಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿವೆಯೆಂಬುದನ್ನು ಗಮನಿಸಿದಾಗ ಪರಿಸ್ಥಿತಿ ಅಷ್ಟೇನೂ ಉತ್ತಮವಾಗಿಲ್ಲ ಎನ್ನಿಸದೆ ಇರದು. ನಿರ್ಧಾರ ಕೈಗೊಳ್ಳುವಲ್ಲಿ ವಿಳಂಬ, ಘಟಕವು ಅಸ್ವಸ್ಥವಾಗುವುದಕ್ಕೆ ಮತ್ತು ಅಸ್ವಸ್ಥತೆಯು ಉಲ್ಬಣಿಸುವುದಕ್ಕೆ ಕಾರಣವಾಗುತ್ತದೆ. ಕೈಗಾರಿಕಾ ಅಸ್ವಾಸ್ಥ್ಯದ ಸಮಸ್ಯೆಯ ತೀವ್ರತೆಯನ್ನು ಮನಗಂಡು ಈ ಅನಗತ್ಯ ವಿಳಂಬವನ್ನು ತೊಡೆದು ಹಾಕಬೇಕಾದುದು ಅತ್ಯಂತ ಅಗತ್ಯವಾಗಿದೆ.

2 ಸಣ್ಣ ಕೈಗಾರಿಕಾ ಘಟಕಗಳಿಗೆ ದೊಡ್ಡ ಘಟಕಗಳಿಂದ ಪಾವತಿಯಾಗಬೇಕಾದ ವ್ಯವಹಾರ ಋಣಗಳನ್ನು ಗರಿಷ್ಠ ಒಂದು ತಿಂಗಳೊಳಗೆ ಪಾವತಿ ಮಾಡಬೇಕೆಂದು ನಿರ್ಬಂಧಿಸಬೇಕು. ದೊಡ್ಡ ಕೈಗಾರಿಕಾ ಘಟಕಗಳ ವಿಳಂಬನೀತಿಯಿಂದ ಅನೇಕ ಸಣ್ಣ ಘಟಕಗಳು ಅಸ್ವಸ್ಥತೆಯತ್ತ ಜಾರುತ್ತಿವೆಯೆಂಬುದು ಅನುಭವವೇದ್ಯ ಸಂಗತಿಯಾಗಿರುವುದರಿಂದ ಇಂಥ ನಿರ್ಬಂಧ ಇರಬೇಕು.

3 ಸಣ್ಣ ಕೈಗಾರಿಕೆಗೆ ಸಂಬಂಧಿಸಿದಂತೆ ಕಾರ್ಮಿಕ ಕಾನೂನಿನಲ್ಲಿ ಹಲವು ತಿದ್ದುಪಡಿಗಳನ್ನು ತರಬೇಕೆಂಬ ಸಲಹೆಗಳಿವೆ. ಉದಾ: ಕನಿಷ್ಠ ಮಜೂರಿ ಅಧಿನಿಯಮವನ್ನು ಸಣ್ಣ ಕೈಗಾರಿಕಾ ಘಟಕಗಳಿಗೆ ಅನ್ವಯಿಸುವಲ್ಲಿ ಸ್ವಲ್ಪ ಮಾರ್ಪಾಡು ಮಾಡಬೇಕೆಂಬ ಸಲಹೆಯಿದೆ.

4 ಸಣ್ಣ ಕೈಗಾರಿಕೆಗಳಿಗೆ ಮಾತ್ರ ಮೀಸಲಾದ ಉತ್ಪನ್ನಗಳ ಪಟ್ಟಿಯಲ್ಲಿ ಮತ್ತೆ ಹಲವು ವಸ್ತುಗಳನ್ನು ಸೇರಿಸಬೇಕೆಂಬುದು ಇನ್ನೊಂದು ಸಲಹೆ. ಇದರಿಂದ ಅಂಥ ಉತ್ಪನ್ನಗಳನ್ನು ತಯಾರಿಸುವ ಘಟಕಗಳಲ್ಲಿ ಅಸಮ ಸ್ಪರ್ಧೆ ತಪ್ಪುತ್ತದೆ.

5 ಸಣ್ಣ ಕೈಗಾರಿಕೆಗಳಿಗೆ ಪ್ರತಿ ಉದ್ಯೋಗಿಗೆ ವರ್ಷಕ್ಕೆ ರೂ. 1,000ದಂತೆ ಆದಾಯ ತೆರಿಗೆಯಲ್ಲಿ 'ಉದ್ಯೋಗ ವಿನಾಯಿತಿ' ನೀಡಬೇಕು.

6 ಆರ್ಥಿಕ ಜೀವಂತಿಕೆಯಿಲ್ಲದ ಯೋಜನೆಗಳನ್ನು ಬ್ಯಾಂಕು/ಹಣಕಾಸು ಸಂಸ್ಥೆಗಳು ಉತ್ತೇಜಿಸಬಾರದು. ಅಂಥ ಯೋಜನೆಗೆ ಹಣಕಾಸು ನೆರವು ನೀಡಿದರೆ ಅವು ಬಹುಬೇಗ ಅಸ್ವಸ್ಥವಾಗುವುದರಲ್ಲಿ ಸಂದೇಹವಿಲ್ಲ.

7 ಅಸ್ವಸ್ಥ ಘಟಕಗಳನ್ನು ಕುರಿತ ಕಾರ್ಯತಂಡದ ಶಿಫಾರಸಿನಂತೆ ರಾಷ್ಟ್ರೀಯ ಬಂಡವಾಳ ನಿಧಿಯೊಂದನ್ನು ಸರಕಾರ ಸ್ಥಾಪಿಸಬೇಕು. ಬಂಡವಾಳದ ಕೊರತೆಯಿಂದ ಅನೇಕ ಉದ್ಯಮಗಳು ಅಸ್ವಸ್ಥವಾಗುತ್ತಿವೆ. (ಭಾರತೀಯ ಸ್ಟೇಟ್ ಬ್ಯಾಂಕು ತನ್ನದೇ ಆದ ಒಂದು ಪುಟ್ಟ 'ಬಂಡವಾಳನಿಧಿ'ಯೊಂದನ್ನು ಸ್ಥಾಪಿಸಿರುವುದನ್ನು ಇಲ್ಲಿ ಸ್ಮರಿಸಬಹುದು.)

8 ಬ್ಯಾಂಕುಗಳು ಅಸ್ವಸ್ಥ ಘಟಕಗಳಿಗೆ ನೀಡುವ ಧನ ಸಹಾಯವನ್ನು ಪುನರ್ಭರಿಸಲು ಭಾರತದ ರಿಸರ್ವ್ ಬ್ಯಾಂಕ್ ಒಂದು ಸುಲಭ ಸಾಲ ನಿಧಿಯನ್ನು (Soft loan fund) ಸ್ಥಾಪಿಸಲು ಮುಂದಾಗಬೇಕು. ಬ್ಯಾಂಕುಗಳ ಉದರಿ ನೀಡಿಕೆ ಸಾಮರ್ಥ್ಯ ಕುಂಠಿತವಾಗಿರುವ ಈ ದಿನಗಳಲ್ಲಿ ಇಂಥ ಯೋಜನೆ ಅಸ್ವಸ್ಥ ಘಟಕಗಳಿಗೆ ವರದಾನವಾದೀತು.

9 ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳು ಕೈಗೊಂಡ ಶುಶ್ರೂಷೆ ಕಾರ್ಯಕ್ರಮಗಳ ಒಂದು ಸಮಗ್ರ ಅಧ್ಯಯನ ನಡೆಸಿ ವರದಿ ಸಲ್ಲಿಸಿದರೆ, ಅಸ್ವಸ್ಥ ಘಟಕಗಳ ಪುನರುಜ್ಜೀವನ ಯೋಜನೆಗಳಿಗೆ ಮಾರ್ಗದರ್ಶನ ಸಿಗಬಹುದು. ಪುನರುಜ್ಜೀವನದ ಯಶಸ್ಸಿನ ಕತೆಗಳನ್ನು ಎತ್ತಿ ತೋರಿಸುವುದಷ್ಟೇ ಅಲ್ಲದೆ ಯಶಸ್ಸಿಗೆ ಸಹಕಾರಿಯಾದ ಅಂಶಗಳನ್ನು ಗುರುತಿಸಬೇಕು ಮತ್ತು ವಿಫಲವಾದ ಪ್ರಸಂಗಗಳತ್ತಲೂ ಹಣಕಾಸು ಸಂಸ್ಥೆಗಳ ಗಮನ ಸೆಳೆಯಬೇಕು. ಈ ದೃಷ್ಟಿಯಿಂದ ಶುಶ್ರೂಷೆ ಕಾರ್ಯಕ್ರಮಗಳ ಒಂದು ಸಮಗ್ರ ಅಧ್ಯಯನ ನಡೆದು ವಿಚಾರಪೂರ್ಣವಾದ ವರದಿಯೊಂದು ಪ್ರಕಟವಾಗಬೇಕಾದುದು ಅಗತ್ಯ.

### ಪರಿಸಮಾಪ್ತಿ

ಅಸ್ವಸ್ಥತೆ ಅನಿವಾರ್ಯ. ಕೈಗಾರಿಕೀಕರಣದ ಫಲಗಳಲ್ಲಿ ಇದೂ ಸೇರಿದೆಯೆಂಬುದು ದಾರುಣ ಸತ್ಯ. ಮುಂದುವರಿದ ಅರ್ಥವ್ಯವಸ್ಥೆಗಳಲ್ಲಿಯೂ ಮಾರುಕಟ್ಟೆ ಬಲಗಳು ಹಾಗೂ ತಾಂತ್ರಿಕ ಜ್ಞಾನದ ಮೇಲಾಟಗಳಿಂದ ಕೈಗಾರಿಕಾ ಘಟಕಗಳು ಅಸ್ವಸ್ಥತೆಯನ್ನು ಎದುರಿಸಬೇಕಾಗಿದೆ.

ಜೀವಿಗಳಿಗೆ ಸಂಬಂಧಿಸಿದ ಸಿದ್ಧಾಂತದಲ್ಲಿ ಡಾರ್ವಿನ್ ಹೇಳಿದ 'ಬಲಿಷ್ಠರ ಉಳಿವು' ಕೈಗಾರಿಕಾ ಕ್ಷೇತ್ರಕ್ಕೂ ಅನ್ವಯವಾಗುತ್ತದೆ. ಅದಕ್ಷವಾದ, ಅವ್ಯವಹಾರಕ್ಕೊಳಪಟ್ಟ, ಮಾರುಕಟ್ಟೆಯ ಅಗತ್ಯಗಳನ್ನು ಮನಗಾಣದ ದುರ್ಬಲವಾದ ಘಟಕಗಳು ಕೈಗಾರಿಕೆಯ ನಕ್ಷೆಯಲ್ಲಿ ಮಾಸಿ ಅಳಿಸಿ ಹೋಗುತ್ತವೆಯೆಂಬುದು ನಿಜ. ಆದರೂ, ಕೈಗಾರಿಕಾ ಘಟಕಗಳ ಅಸ್ವಸ್ಥತೆಗೆ ಕಾರಣಗಳನ್ನು ಆರಂಭದಲ್ಲೇ ಗ್ರಹಿಸಿ ಅವುಗಳ ದೌರ್ಬಲ್ಯವನ್ನು ನಿವಾರಿಸಿ ಬಲಪಡಿಸುವ ಜವಾಬ್ದಾರಿ ಇದ್ದೇ ಇದೆ. ಉದಾಹರಣೆಗೆ—ದಿನೇ ದಿನೇ ಬದಲಾಗುತ್ತಿರುವ ತಾಂತ್ರಿಕ ಜಗತ್ತಿನಲ್ಲಿ ಆಧುನೀಕರಣ (modernisation) ಗೊಳಿಸದಿರುವುದರಿಂದ ಉದ್ಯಮಗಳು ಅಸ್ವಸ್ಥವಾಗುತ್ತಿವೆ. ಆದ್ದರಿಂದ ನಿರಂತರವಾಗಿ ಆಧುನೀಕರಣಗೊಳಿಸುತ್ತಲೇ ಇರಬೇಕಾದ್ದು ಉದ್ಯಮಿಗಳ ಜವಾಬ್ದಾರಿ. ಬಂಡವಾಳದ ಕೊರತೆಯಿರುವ ಭಾರತದಂಥ ದೇಶದಲ್ಲಿ ಅಪಾರ ಹಣ ವಿನಿಯೋಜಿಸಿ ಆರಂಭಿಸಿದ ಘಟಕವೊಂದು ಆಧುನೀಕರಣಗೊಳಿಸದ ಕಾರಣದಿಂದ ಅಸ್ವಸ್ಥವಾದರೆ ಅದರಿಂದ ದೇಶಕ್ಕೆ ಎಷ್ಟು ನಷ್ಟ? ಆಧುನೀಕರಣಗೊಳಿಸದಿರುವುದು ಉದ್ಯಮಿಯ ಒಂದು ಅಪರಾಧವೆಂದೇ ಹೇಳಬಹುದಲ್ಲವೇ?

ಇನ್ನು ವ್ಯವಸ್ಥೆಯ ಕುಂದುಕೊರತೆಗಳಿಂದ ಅನೇಕ ಉದ್ಯಮ ಘಟಕಗಳು ರೋಗಗ್ರಸ್ತವಾಗುತ್ತಿವೆಯೆಂಬುದನ್ನು ತಳ್ಳಿಹಾಕುವಂತಿಲ್ಲ. ಕೈಗಾರಿಕಾ ಅಸ್ವಸ್ಥತೆಗೆ ಅವಕಾಶವೇ ಇರದಂಥ ಒಂದು ಸಮರ್ಥ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕಾದದ್ದು ಅಗತ್ಯ. ಈ ದಿಶೆಯಲ್ಲಿ ಪ್ರತಿಯೊಂದು ಘಟಕದ ಪ್ರತಿಯೊಂದು ಉದರಿ ಸಂಸ್ಥೆಯ ಪ್ರಜ್ಞೆ ಸದಾ ಜಾಗೃತವಾಗಿರಬೇಕು. ★

● ● ●

ಕೈಗಾರಿಕಾ ಅಸ್ವಸ್ಥತೆಗೆ ಮುಖ್ಯ ಕಾರಣಗಳನ್ನು ಹೀಗೆ ವಿಶ್ಲೇಷಿಸಬಹುದು :

**ಅಸ್ವಸ್ಥತೆ**

| ವ್ಯವಸ್ಥಾಪನೆಯ ದೋಷ | ಹಣಕಾಸಿನ ಅಸಮರ್ಪಕತೆ | ಸಿಬ್ಬಂದಿಯ ದೋಷಗಳು |
|---|---|---|
| (i) ಮಂಡಲಿಯ ರಚನೆ | (i) ಮುನ್ಸೂಚಿ | (i) ಅವ್ಯವಸ್ಥಿತ ಕಾರ್ಮಿಕ ಸಂಘಗಳು |
| (ii) ಆಡಳಿತ ಮತ್ತು ನಿಯಂತ್ರಣ | (ii) ಬಜೆಟ್ ರಚನೆ | (ii) ಚೋದನೆಯ ಅಭಾವ |
| (iii) ಯೋಜನೆ | (iii) ಉದರಿ ಸೌಲಭ್ಯ | (iii) ಕಾರ್ಮಿಕ ಉತ್ಪಾದನೆಯ ಕೊರತೆ |
| (iv) ಅಭಿವೃದ್ಧಿ | (iv) ಅಯೋಜಿತ ವಿಕ್ರಯಗಳು | (iv) ಅಶಿಸ್ತು |
| | (v) ದಾಸ್ತಾನು ನಿಯಂತ್ರಣ ರಾಹಿತ್ಯ | |

# ಸ್ವಿಸ್‌ಕ್ಯಾಷ್: ಹಣಕಾಸು ಮಾಹಿತಿ ಪೂರೈಕೆಯ ಕ್ಷೇತ್ರದಲ್ಲಿ ಹೊಸ ಸೇವೆ

ಮೂಲ : ಆರ್. ಎ. ಮಾಹರ್
ಅನುವಾದ : ಸಾ. ರಾಜಗೋಪಾಲ

**ಅಂತರರಾಷ್ಟ್ರೀಯ ಬ್ಯಾಂಕಿಂಗ್ ಇಂದು ಬಹುಮುಖವಾಗಿ ವರ್ಧಿಸುತ್ತಿದೆ. ಅದು ನೂತನ ವಿಜ್ಞಾನ ತಂತ್ರಜ್ಞಾನಗಳ ನೆರವಿನಿಂದ ಕ್ಷಣಾರ್ಧದಲ್ಲಿ ಪ್ರಪಂಚದ ಯಾವುದೇ ಮೂಲೆಯಲ್ಲಿನ ಮಾಹಿತಿಯನ್ನು ಸಂಗ್ರಹಿಸಿ ಒದಗಿಸುವ ವಿನೂತನ ಸೇವೆಯೊಂದು ಈಗ ವಿಕಾಸಗೊಂಡಿದೆ.**

ಗಣಕಗಳು, ಸ್ವಯಂಚಲೀ ದತ್ತಾಂಶ ಪ್ರಕ್ರಮೀಕರಣಗಳಲ್ಲಾಗಿರುವ ಹೆಚ್ಚಳ—ಇವು ಬ್ಯಾಂಕುಗಳ ಮತ್ತು ಇತರ ಹಣಕಾಸು ಸೇವಾಸಂಸ್ಥೆಗಳ ಕಲಾಪಗಳಲ್ಲಿ ಕ್ರಾಂತಿಯನ್ನೇ ಉಂಟುಮಾಡಿವೆ ಎನ್ನುವುದು ರೂಢಿಯ ವಿಷಯವಾಗಿದೆ. ಬ್ಯಾಂಕುಗಳು ನೀಡುವ ಹಣಕಾಸು ಸೇವೆಗಳನ್ನು ಮಾಹಿತಿಗೆ ಮೌಲ್ಯ ಕೊಡಿಸುವುದರ ಮೂಲಕ ಪ್ರಾಮುಖ್ಯ ಪಡೆಯಲು ಮತ್ತು ವಿಸ್ತರಿಸಲು ಈ ಕ್ರಾಂತಿ ಕಾರಣವಾಯಿತು. ತತ್ಫಲವಾಗಿ ಇದರಿಂದ ಮಾಹಿತಿ ಉತ್ಪನ್ನಗಳೆಂದು (ಇನ್‌ಫರ್ಮೇಷನ್ ಪ್ರಾಡಕ್ಟ್) ಕರೆಯಲಾಗುವ ಬ್ಯಾಂಕ್ ಸೇವಾಸಮುದಾಯಗಳಿಗೆ ಮಾನ್ಯತೆ ಪ್ರಾಪ್ತವಾಯಿತು.

### ಮಾಹಿತಿ ಉತ್ಪನ್ನಗಳು

ಮಾಹಿತಿ ಉತ್ಪನ್ನಗಳ ಸಮುದಾಯದಲ್ಲಿ ಮಾಹಿತಿ ರವಾನೆಯನ್ನಾಧರಿಸಿದ ಸೇವೆಗಳು ಸೇರಿವೆ. ಮುಖ್ಯ ಮಾಹಿತಿ ಉತ್ಪನ್ನವೆಂದರೆ ಪಾವತಿ ಮತ್ತು ಸ್ವೀಕಾರ ಅಥವಾ ಹಣ ವರ್ಗಾವಣೆ. ಬ್ಯಾಂಕಿನ ಪುಸ್ತಕಗಳಲ್ಲಿ ತನ್ನ ಖಾತೆಯನ್ನು ಋಣಿಸಿ, ಅದೇ ಬ್ಯಾಂಕಿನ ಅಥವಾ ಬೇರೆ ಬ್ಯಾಂಕಿನ ಇನ್ನೊಂದು ಖಾತೆಗೆ, ಪುಸ್ತಕದ ವರ್ಗಾವಣೆ ಅಥವಾ ಪಾವತಿ ತೀರುವೆಯ ಮೂಲಕ ಧನಿಸಲೆಂದು ಗ್ರಾಹಕನೊಬ್ಬ ಸೂಚನೆ ನೀಡಿದಾಗ ಈ ಸೇವೆಯನ್ನು ಬಳಸಿಕೊಳ್ಳುತ್ತಾನೆ. ಹಣ ವರ್ಗಾವಣೆ ಉತ್ಪನ್ನಬ್ಯಾಂಕಿಂಗ್‌ನಷ್ಟೇ ದೀರ್ಘವಾಗಿ ಅಸ್ತಿತ್ವದಲ್ಲಿದೆ. ಇದೊಂದು ಮಾಹಿತಿ ಉತ್ಪನ್ನ. ಏಕೆಂದರೆ ಬ್ಯಾಂಕಿನ ಪ್ರಾಥಮಿಕ ಕಾರ್ಯಭಾರವೆಂದರೆ ತನ್ನ ಪುಸ್ತಕಗಳಲ್ಲಿ ಬದಲಾವಣೆಗಳನ್ನು ಮಾಡುವುದು ಅಥವಾ ತನ್ನೊಡನೆ ಬಾತ್ಮಿ ಸಂಬಂಧ ಇಟ್ಟುಕೊಂಡಿರುವ ಇತರ ಬ್ಯಾಂಕುಗಳ ಪುಸ್ತಕಗಳಲ್ಲಿ ಬದಲಾವಣೆಯನ್ನುಂಟು ಮಾಡುವುದೇ ಆಗಿದೆ. ಏಕೆಂದರೆ ರವಾನಿಸಲಾದ ಮೊಬಲಗು ದೊಡ್ಡ ಮೊತ್ತದಾಗಿರುತ್ತದೆ ಮತ್ತು ಪಾವತಿಯ ಕಾಲ ಅತ್ಯಂತ ಹ್ರಸ್ವವಾಗಿರುವುದರಿಂದ, ಸಂವಹನವನ್ನು ಅತ್ಯಂತ ವೇಗವಾದ ಹಾಗೂ ಲಭ್ಯವಿರುವ ಅತ್ಯಂತ ನಿಷ್ಕೃಷ್ಟವಾದ ಸಾಧನದ ಮೂಲಕ ಮಾಡಬೇಕು.

ತಂತ್ರಜ್ಞಾನ ಉತ್ತಮಗೊಂಡಂತೆ, ಸ್ಪರ್ಧೆ ಹೆಚ್ಚಾದಂತೆ ಬ್ಯಾಂಕುಗಳು ದತ್ತಾಂಶವನ್ನು ವೇಗವಾಗಿ ಬಟವಾಡೆ ಮಾಡಲು ಪ್ರಾರಂಭಿಸಿದುವು. ಸಿಲ್ಕುಗಳ ಜೊತೆಗೆ ಬಿಡಿ ವಹಿವಾಟುಗಳನ್ನು ವರದಿ ಮಾಡುವುದರ ಮೂಲಕ ತಮ್ಮ ಸೇವೆಯನ್ನು ವಿಸ್ತರಿಸಿದುವು. ಹೀಗೆ ಬ್ಯಾಂಕಿಂಗಿನ ಎರಡನೆಯ ದೊಡ್ಡ ಮಾಹಿತಿ ಸೇವೆಯನ್ನು—ನಗದು ನಿರ್ವಹಣೆ—ವಿಕಾಸಗೊಳಿಸಲಾಯಿತು. ಸ್ವಿಸ್ ಬ್ಯಾಂಕ್ ನಿಗಮ (ಸ್ವಿಬ್ಯಾನಿ) ತನ್ನದೇ ಆದ ಬಹುಭಾಷೀಯ ಮತ್ತು ಬಹುಚಲಾರ್ಥಗಳ (ಕರೆನ್ಸಿ) ನಗದು ನಿರ್ವಹಣಾ ವ್ಯವಸ್ಥೆಯನ್ನು—ಸ್ವಿಸ್‌ಕ್ಯಾಷ್ ಯಾವುದೇ ದೇಶದಲ್ಲಿಯ ಯಾವುದೇ ಕರೆನ್ಸಿಯಲ್ಲಿಯ ವಹಿವಾಟನ್ನು ವರದಿ ಮಾಡಲು ಅಭಿವೃದ್ಧಿಪಡಿಸಿತು. ಸ್ವಿಸ್‌ಕ್ಯಾಷ್ ಚಂದಾದಾರರು ದಿನದ ಯಾವುದೇ ಹೊತ್ತಿನಲ್ಲಿ, ತಮ್ಮ ರಾಷ್ಟ್ರದಲ್ಲಿ ಅಥವಾ ಅಂತರರಾಷ್ಟ್ರೀಯವಾಗಿ ದೊರೆಯುವ ದ್ರವನಿಧಿಗಳ ಬಗ್ಗೆ ಮತ್ತು ಹಣಕಾಸು ಅಧಿಕಾರಿಗಳಿಗೆ ಅತಿ ಆಸಕ್ತಿಯದಾದ ಮಾಹಿತಿಯ ಸಮೂಹದ ಬಗ್ಗೆ ದಿಢೀರ್ ವರದಿಗಳನ್ನು ಪಡೆಯಬಹುದು. ಉದಾಹರಣೆಗೆ, ಲಂಡನ್, ಹಾಂಗ್‌ಕಾಂಗ್ ಮತ್ತು ಸಿಂಗಪುರಗಳಲ್ಲಿ ಒಂದು ಸಂಸ್ಥೆಯ ವಿವಿಧ ಖಾತೆಗಳ ಹಿಂದಿನ ದಿನದ ಸಿಲ್ಕೇನು ? ಅಥವಾ ನ್ಯೂಯಾರ್ಕಿನಲ್ಲಿ ನಿನ್ನೆ ಅಮೆರಿಕನ್ ಡಾಲರಿನ ಯಾವ ಪಾವತಿಗಳನ್ನು ಸ್ವೀಕರಿಸಲಾಯಿತು ? ಡಾಯಿಷ್ ಮಾರ್ಕ್ ಮತ್ತು ಯೆನ್‌ಗಳಲ್ಲಿ ತಮ್ಮ ಹೆಸರಿನಲ್ಲಿ ಹೊಂದಿರಲಾಗಿರುವ ವಿದೇಶಿ ಕರೆನ್ಸಿ ಎಷ್ಟು ? ಇಂಥ ಅಧುನಾತನವಾದ (ಅಪ್-ಟು-ಡೇಟ್) ಮಾಹಿತಿ ತನ್ನ ಕೈಯಲ್ಲಿರುವುದರಿಂದ ಒಂದು ಕಂಪನಿ ನಿರ್ದಿಷ್ಟ ಸನ್ನಿವೇಶಗಳಿಗೆ ತತ್‌ಕ್ಷಣ ಪ್ರತಿಕ್ರಿಯಿಸಬಹುದು, ಮತ್ತು ಹಣಕಾಸಿನ ವ್ಯವಸ್ಥಿತ ಯೋಜನೆ

---

R. A. Mahar : Swiscash—A New Financial Information Service, *Economic and Financial Prospects*, Swiss Bank Corporation, Basle, Switzerland.

ಅನುವಾದ : ರಾಜಗೋಪಾಲ, ಭಾಷಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್ ; ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ, ಭಾ.ಸ್ಟೇ.ಬ್ಯಾಂ. ಕನ್ನಡ ಸಂಘಗಳು, ಬೆಂಗಳೂರು ೫೬೦ ೦೦೨

ಯಿಂದ ಹಾಗೂ ದ್ರವದ ಚುರುಕು ನಿರ್ವಹಣೆಯಿಂದ ಸ್ವದೇಶದಲ್ಲಿ ಮತ್ತು ವಿದೇಶದಲ್ಲಿ, ಹಗಲೂ ರಾತ್ರಿ ತನ್ನ ಹಣವನ್ನು ಅತ್ಯಂತ ದಕ್ಷವಾಗಿ ತೊಡಗಿಸಬಹುದು.

ಕೆಳಗೆ ಕಾಣಿಸಿರುವ ಕಂಪನಿಗಳಿಗೆ ಸ್ವಿಸ್‌ಕ್ಯಾಪ್ ಒಂದು ವಿಶೇಷ ಸೇವೆಯಾಗಿದೆ.

1 ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ತೊಡಗಿರುವ, ಅಂದರೆ, ಹಣ ವಹಿವಾಟುಗಳು ಅಧಿಕವಾಗಿರುವ ಕಂಪನಿಗಳಿಗೆ
2 ಪೂರ್ಣವಾಗಿ ಅಥವಾ ಭಾಗಶಃ ವಿಕೇಂದ್ರೀಕೃತವಾದ ನಿಧಿ ಭಂಡಾರದ (ಟ್ರೆಜರಿ) ನಿರ್ವಹಣೆ ಇರುವ ಕಂಪನಿಗಳಿಗೆ
3 ದ್ರವತ್ವದ ಅಲ್ಪಕಾಲಿಕ ಕೊರತೆ ಅಥವಾ ಹೆಚ್ಚಳವನ್ನು ಹೊಂದಿರುವ ಕಂಪನಿಗಳಿಗೆ
4 ವಿದೇಶಿ ಕರೆನ್ಸಿಯ ನಷ್ಟ ಸಂಭಾವ್ಯತೆಗೆ ಈಡಾಗಿರುವ ಮತ್ತು ದುಬಾರಿ ಬಡ್ಡಿದರಗಳಿಗೆ ಪಕ್ಕಾಗಿರುವ ಕಂಪನಿಗಳಿಗೆ
5 ಹಣಕಾಸು ಯೋಜನೆಯಿಂದ ಯಥೇಚ್ಛವಾಗಿ (ಲಾಭವನ್ನು) ನಿರೀಕ್ಷಿಸುವ ಕಂಪನಿಗಳಿಗೆ

### ಸ್ವಿಸ್‌ಕ್ಯಾಪಿನ ಕಾರ್ಯವಿಧಾನ

ಸ್ವಿಟ್ಜರ್‌ಲೆಂಡಿನಲ್ಲಿರುವ ಮತ್ತು ವಿದೇಶದಲ್ಲಿರುವ ಸ್ವಿಸ್ ಬ್ಯಾಂಕ್ ಶಾಖೆ ಮತ್ತು ಸಹಸಂಸ್ಥೆಗಳಲ್ಲಿಯ ಗಣಕ ಯಂತ್ರ ಸ್ವಿಸ್ ಕ್ಯಾಪ್‌ಗೆ ಸಂಬಂಧಿಸಿದ, ಪ್ರಸ್ತುತವಾದ, ಎಲ್ಲ ದತ್ತಾಂಶವನ್ನು ನೇರವಾಗಿ ದಾಖಲಿಸುತ್ತದೆ. ಆದ್ದರಿಂದಲೇ ಇದು ಬ್ಯಾಂಕು ಗ್ರಾಹಕರ ಪರವಾಗಿ ನಡೆಸಿದ ವಹಿವಾಟುಗಳಿಗೆ ತದ್ವತ್ತಾಗಿ ಸಂವಾದಿಯಾಗಿರುತ್ತದೆ. ಪ್ರಕೃತವಾದ ಪ್ರತಿಯೊಂದು ವಿವರವನ್ನೂ ಸೇರಿಸಲಾಗುತ್ತದೆ. ಉದಾಹರಣೆಗೆ, ಪಾವತಿಯ ಕಾರಣ, ಮೌಲ್ಯದ ದಿನಾಂಕ, ಗಡುವಿನ ದಿನಾಂಕ, ಮುಕ್ತಾಯದ ದಿನ, ಪ್ರತಿಭೂತಿಗಳ (ಸೆಕ್ಯುರಿಟೀಸ್) ವಿವರಣೆ ಇತ್ಯಾದಿ. ಸ್ಥಳೀಯ ಕಾಲಮಾನದಂತೆ ದಿನದ ಕೆಲಸ ಮುಗಿದಾಗ, ಯೂರೋಪಿನಲ್ಲಿರುವ ದತ್ತಾಂಶ ಆಧಾರ ಕ್ಷೇತ್ರಕ್ಕೆ (ಡೇಟಾಬೇಸ್) ಪ್ರತಿಯೊಂದು ಸ್ವಿಸ್ ಬ್ಯಾಂಕ್ ಶಾಖೆ ಅಂತರರಾಷ್ಟ್ರೀಯ ಗಣಕ ಜಾಲದ ಮೂಲಕ ಆ ದಿನದ ಸ್ವಿಸ್‌ಕ್ಯಾಪ್ ದತ್ತಾಂಶವನ್ನು ರವಾನಿಸುತ್ತವೆ. ಆಗ ಈ ಮಾಹಿತಿಯ ಪುನಸ್ಸಂಪಾದನೆ (ರಿಟ್ರೀವಲ್) ಚಂದಾದಾರರಿಗೆ ತಕ್ಷಣ ದೊರೆಯುತ್ತದೆ. ಮತ್ತೆ ಬೇಕೆನಿಸುವವರೆಗೆ ದಾಸ್ತಾನಿನಲ್ಲಿರುತ್ತದೆ.

ಪ್ರಪಂಚದ ಯಾವುದೇ ಭಾಗದಲ್ಲಿರುವ ಅಂತರರಾಷ್ಟ್ರೀಯ ಗಣಕ ಜಾಲಕ್ಕೆ ಸ್ಥಳೀಯ ದೂರವಾಣಿ ಕರೆಯ ಮೂಲಕ ಸ್ವಿಸ್ ಕ್ಯಾಪ್ ಚಂದಾದಾರರು ದತ್ತಾಂಶಕ್ಕೆ(ಡೇಟಾ) ಪ್ರವೇಶಾನುಜ್ಞೆಯನ್ನು ಪಡೆಯುತ್ತಾರೆ. ಈ ವ್ಯವಸ್ಥೆಗೆ ತನ್ನ ಗುರುತನ್ನು ಗೊತ್ತುಪಡಿಸಿಕೊಂಡರೆ, ಚಂದಾದಾರ ತಾನು ಇಚ್ಛಿಸುವ ಮಾಹಿತಿಯನ್ನು, ದೂರಲಿಪಿ (ಟೆಲೆಕ್ಸ್), ಮುದ್ರಕ (ಪ್ರಿಂಟರ್) ಅಥವಾ ದೃಶ್ಯ ಪ್ರದರ್ಶನ ಘಟಕದ (ವಿಜುಯಲ್ ಡಿಸ್ಪ್ಲೇ ಯೂನಿಟ್) ಮೂಲಕ ಸ್ವೀಕರಿಸಬಹುದು.

### ಯಾವ ರೀತಿಯ ಮಾಹಿತಿಯನ್ನು ಗ್ರಾಹಕ ನಿರೀಕ್ಷಿಸಬಹುದು ?

ಒಬ್ಬ ಸ್ವಿಸ್‌ಕ್ಯಾಪ್ ಚಂದಾದಾರ ಪ್ರಪಂಚದ ಯಾವುದೇ ಭಾಗದಲ್ಲಿರುವ ಸ್ವಿಸ್‌ಬ್ಯಾಂಕ್ ಶಾಖೆಗಳಲ್ಲಿ ತನ್ನ ಕಂಪನಿ ಹೊಂದಿರುವ ಎಲ್ಲ ಖಾತೆಗಳ ಬಗ್ಗೆ ಮಾಹಿತಿಯನ್ನು ಪುನಸ್ಸಂಪಾದನೆ ಮಾಡಿಕೊಳ್ಳಬಹುದು. ಮತ್ತು ಇದು ಯಾವುದೇ ಕರೆನ್ಸಿಯಲ್ಲಿ ಆಗಬಹುದು. ಎಲ್ಲ ದತ್ತಾಂಶವನ್ನು ಬಹಿರಂಗವಾಗದಂತೆ, ಅಥವಾ ತಿದ್ದಲಾಗದಂತೆ ಭದ್ರವಾಗಿಡುವಂತೆ ಈ ವ್ಯವಸ್ಥೆಯನ್ನು ವಿನ್ಯಾಸಗೊಳಿಸಲಾಗಿದೆ. ಈ ವ್ಯವಸ್ಥೆಯ ಅಡಿಯಲ್ಲಿ ಎರಡು ರೀತಿಯ ವರದಿಗಳನ್ನು, ಅವೆಂದರೆ ಸಿಲ್ಕು ವರದಿ (ಬ್ಯಾಲೆನ್ಸ್ ರಿಪೋರ್ಟ್) ಮತ್ತು ವಹಿವಾಟು ವರದಿಗಳನ್ನು (ಟ್ರಾನ್ಸಾಕ್ಷನ್ ರಿಪೋರ್ಟ್), ಪಡೆಯಬಹುದು. ಇವು ಹಲವು ಭಾಷೆಗಳಲ್ಲಿ ಲಭ್ಯವಿರುತ್ತವೆ.

ಸಿಲ್ಕು ವರದಿಯ ಪ್ರಮುಖ ವೈಲಕ್ಷಣ್ಯವೆಂದರೆ, ಖಾತಾ ಸಿಲ್ಕು (ಲೆಡ್ಜರ್ ಬ್ಯಾಲೆನ್ಸ್), ಲಭ್ಯ ಸಿಲ್ಕು (ಅವೇಲಬಲ್ ಬ್ಯಾಲೆನ್ಸ್) ಮತ್ತು 1ರಿಂದ 7 ದಿನಗಳ ವರೆಗಿನ ಅವಧಿಯ ವಾಯಿದಾ ವಹಿವಾಟುಗಳ (ಫಾರ್ವರ್ಡ್ ಟ್ರಾನ್ಸಾಕ್ಷನ್ಸ್) ದೈನಂದಿನ ಮೊತ್ತಗಳನ್ನು ನೀಡುವುದೇ ಆಗಿದೆ.

ವಹಿವಾಟು ವರದಿಯ ಪ್ರಮುಖ ವೈಲಕ್ಷಣ್ಯವೆಂದರೆ, ಪಾವತಿಯ ಕಾರಣ, ವಹಿವಾಟಿನ ಮೂಲಕರ್ತ, ಮೌಲ್ಯ ದಿನಾಂಕ ಇವನ್ನು ಇದು ಒಳಗೊಂಡಿರುತ್ತದೆ. ಚಂದಾದಾರರು ಎಲ್ಲ ವಹಿವಾಟುಗಳ ವರದಿಗಳನ್ನೂ ಪಡೆಯುವ ವ್ಯವಸ್ಥೆ ಮಾಡಿಕೊಳ್ಳಬಹುದು ಅಥವಾ ಈ ಎಲ್ಲ ನಿರ್ದಿಷ್ಟ ವಹಿವಾಟುಗಳ (ಉದಾಹರಣೆಗೆ, ಉದರಿ ತಿಳಿವಳಿಕೆಗಳನ್ನು ಮಾತ್ರ ಇಲ್ಲವೇ ಒಂದು ನಿರ್ದಿಷ್ಟ ಕನಿಷ್ಠ ಮೊತ್ತದ ವಹಿವಾಟುಗಳ ವರದಿಗಳನ್ನು ಮಾತ್ರ ಪಡೆಯುವ ವ್ಯವಸ್ಥೆ ಮಾಡಿಕೊಳ್ಳಬಹುದು. ಈ ಬಗ್ಗೆ ಆಯ್ಕೆ ಸ್ವಾತಂತ್ರ್ಯ ಅವರದು.

ಆಧುನಿಕ ಮಾಹಿತಿ ವ್ಯವಸ್ಥೆಗಳು, ಗಣಕ ಕಾಲವನ್ನು ಹಂಚಿಕೊಳ್ಳುವುದು (ಕಂಪ್ಯೂಟರ್ ಟೈಮ್ ಷೇರಿಂಗ್) ಮತ್ತು ಇತರ ಸ್ವಯಂಚಲೀ ರೂಪಗಳ ಬಗ್ಗೆ ಸಂಪರ್ಕ ನಿಕಟವಾದಂತೆ ಬ್ಯಾಂಕುಗಳ ಅನೇಕ ಸಾಂಪ್ರದಾಯಿಕ ಸೇವೆಗಳು ಸ್ವಯಂಚಲೀಕೃತ ವರದಿಯ ವ್ಯವಸ್ಥೆಯತ್ತ ಸಾಗುತ್ತಿವೆ. ಉದಾಹರಣೆಗೆ, ಪ್ರತಿಭೂತಿ (ಸೆಕ್ಯುರಿಟೀಸ್) ವಹಿವಾಟುಗಳ ಬಗ್ಗೆ ವರದಿ ಮಾಡುವುದರಲ್ಲಿ ಸ್ವಿಸ್‌ಬ್ಯಾಂಕಿನದು ಎತ್ತಿದ ಕೈ. ★



• • •

# ಬ್ಯಾಂಕುಗಳ ಪ್ರಾದೇಶಿಕ ಪರಿಸರಣ ಹಾಗೂ ಅಭಿವೃದ್ಧಿ

ಡಾ. ಎಸ್. ಎಸ್. ಹಿರೇಮಠ

**ಕರ್ನಾಟಕ ರಾಜ್ಯದಲ್ಲಿ ಬ್ಯಾಂಕು ಕಛೇರಿಗಳ ಸಂಖ್ಯೆ ತಕ್ಕಮಟ್ಟಿಗೆ ಬೆಳೆದಿದ್ದರೂ ವಿವಿಧ ಜಿಲ್ಲೆಗಳಲ್ಲಿಯ ಜನಸಂಖ್ಯೆ, ಸೇವಾವಕಾಶ, ಠೇವಣಿ ಸಂಗ್ರಹಣೆ, ನೆರವಿನ ಸಾಧ್ಯತೆ, ಅಭಿವೃದ್ಧಿಯ ಭವಸಾಮರ್ಥ್ಯ ಮುಂತಾದ ದೃಷ್ಟಿಗಳಿಂದ ಬಹಳಷ್ಟು ಅಸಮರ್ಪಕ ಪರಿಸ್ಥಿತಿಯೇ ಇದೆ.**

ಈ ಶತಮಾನದಲ್ಲಿ ಬ್ಯಾಂಕುಗಳು ಪ್ರಾದೇಶಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ತೃತೀಯ ಜಗತ್ತಿನ ಅಭಿವೃದ್ಧಿ ಪಥವನ್ನು ಬಹಳಷ್ಟು ಬದಲಾಯಿಸಿ ಮುಂದುವರಿಯುವಂತೆ ಮಾಡಿದ ಶ್ರೇಯಸ್ಸು ಬ್ಯಾಂಕುಗಳಿಗೆ ಸಲ್ಲಲೇಬೇಕು. ಕಳೆದ ಎರಡು ಶತಕದಿಂದ ಪರರ ದಾಸ್ಯದಲ್ಲಿ ಬಳಲಿದ ಭಾರತ, ಆರ್ಥಿಕವಾಗಿ ಬಹಳಷ್ಟು ಅಸ್ತವ್ಯಸ್ತಗೊಂಡು ಸರಿಯಾದ ಅಭಿವೃದ್ಧಿ ಸಾಧಿಸದೆ ಬಹಳಷ್ಟು ತೊಂದರೆಗೊಳಗಾಗಿತ್ತು. ಹಿಂದುಳಿದ ಆರ್ಥಿಕ ಪರಿಸ್ಥಿತಿಯೊಂದಿಗೆ ಪ್ರಾದೇಶಿಕ ಅನಭಿವೃದ್ಧಿಯೂ ಒಟ್ಟಾರೆಯ ಬೆಳವಣಿಗೆಯನ್ನು ಕುಂಠಿತಗೊಳಿಸಿತ್ತು. ಇದರ ಪ್ರಖರತೆಯನ್ನು ಜನಸಂಖ್ಯಾ ಸ್ಫೋಟ ಇನ್ನಷ್ಟು ಹೆಚ್ಚಿಸಿದೆ.

ಸ್ವಾತಂತ್ರ್ಯಾನಂತರ ಭಾರತದ ಒಟ್ಟಾರೆ ಪರಿಸ್ಥಿತಿ ಬಹಳಷ್ಟು ಸಮಸ್ಯಾತ್ಮಕವಾಗಿತ್ತು. ಹಣದ ಕೊರತೆ, ಪ್ರಾದೇಶಿಕ ಅನಭಿವೃದ್ಧಿ, ಬಡತನ, ನಿರುದ್ಯೋಗ ಮತ್ತು ಕೆಲವೇ ಸ್ಥಳ ಹಾಗೂ ಜನರಲ್ಲಿ ಹಣದ ಸಂಗ್ರಹ ಇವೆಲ್ಲವೂ ದೇಶದ ಅಭಿವೃದ್ಧಿಯನ್ನು ತಡೆದಿದ್ದವು. ಇವನ್ನು ನಿವಾರಿಸಲು ಮತ್ತು ಪ್ರಾದೇಶಿಕ, ಸ್ಥಾನಿಕ ಹಾಗೂ ವಿವಿಧ ಜನರ ಅಭಿವೃದ್ಧಿ ಸಾಧಿಸಲು ಬ್ಯಾಂಕುಗಳು ಜನ್ಮ ತಾಳಿದವು. ಎಷ್ಟೋ ವರ್ಷ ಬ್ಯಾಂಕುಗಳು ಕೇವಲ ಹಣ ವ್ಯಾಪಾರಿ ಸಂಸ್ಥೆಗಳಾಗಿಯೇ ಮುಂದುವರಿದರೂ ಅಭಿವೃದ್ಧಿಗೆ ಸಾಕಷ್ಟು ಪ್ರೋತ್ಸಾಹ ನೀಡಿದುವು. ರಾಷ್ಟ್ರೀಕರಣಗೊಂಡ ಅನಂತರ ಅವುಗಳ ಪ್ರಯತ್ನ ಬಹುಮುಖವಾಗಿ ಸಾಗಿರುವುದು ಭಾರತ ಹಾಗೂ ಅದರ ಇನ್ನುಳಿದ ರಾಜ್ಯಗಳ ಅಭಿವೃದ್ಧಿಗೆ ಹೆಚ್ಚಿನ ಚಾಲನೆ ಒದಗಿಸಿದೆ.

ಬ್ಯಾಂಕುಗಳು ಹಣ ಒದಗಿಸುವ ಸಂಸ್ಥೆಗಳಾದರೂ ಅವು ನಾನಾ ನಮೂನೆಯ ಆರ್ಥಿಕ ಚಟುವಟಿಕೆಗಳ ಉದಯಕ್ಕೆ ಸಹಾಯ ಮಾಡಿವೆಯಲ್ಲದೆ ಹಿಂದಿನಿಂದ ಬಂದ ಆರ್ಥಿಕ ಚಟುವಟಿಕೆಗಳ ಪುನರುಜ್ಜೀವನಕ್ಕೆ ಸಹಾಯ ಮಾಡಿ ಹಣದ ಹಂಚುವಿಕೆಯ ಅಸಮತೋಲವನ್ನು ನಿಯಂತ್ರಿಸಿ ಈ ಮೂಲಕ ಜನರ ಹಾಗೂ ಪ್ರಾದೇಶಿಕ ಅಭಿವೃದ್ಧಿ ಸಾಧಿಸುತ್ತ ಇವೆ. ಅಲ್ಲದೆ ಭಾರತದಲ್ಲಿ ಅಭಿವೃದ್ಧಿ ಕೃಷಿಯನ್ನೇ ಹೆಚ್ಚಾಗಿ ಅವಲಂಬಿಸಿರುವುದರಿಂದ ಕೃಷಿಯ ಅಭಿವೃದ್ಧಿಗಾಗಿ ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು. ಸಧ್ಯಕ್ಕೆ ಈ ಎಲ್ಲ ನಮೂನೆಯ ಬ್ಯಾಂಕುಗಳ ಮೂಲಕ ಭಾರತದ ಪ್ರಾದೇಶಿಕ ಅಭಿವೃದ್ಧಿ ನಿಧಾನವಾದರೂ ಭದ್ರವಾಗಿ ಮುನ್ನಡೆಯುತ್ತಿದೆ. ಈ ಲೇಖನದಲ್ಲಿ ಕರ್ನಾಟಕದ ಬ್ಯಾಂಕುಗಳ ಪ್ರಾದೇಶಿಕ ಪರಿಸರಣೆಯ ವಿಶ್ಲೇಷಣೆಯನ್ನು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಮಾಡಲಾಗಿದೆ.

### ಬ್ಯಾಂಕು ಪ್ರಾದೇಶಿಕ ಪರಿಸರ

ಅಭಿವೃದ್ಧಿ ಹೆಚ್ಚು ಪಾಲು ಹೊಸ ಆಯಾಮದಿಂದಲೇ ಪ್ರಾರಂಭಗೊಳ್ಳುತ್ತದೆ. ಅದರಂತೆ ಬ್ಯಾಂಕುಗಳು ಹಾಗೂ ಇನ್ನಿತರ ಇಂಥ ಸಂಸ್ಥೆಗಳು ಹೆಚ್ಚು ಹೆಚ್ಚು ಜನರ ಬಳಿ ಸಮೀಪವರ್ತಿಯಾಗಿರುವುದು ಅವಶ್ಯ. ಇದು ತೀವ್ರವಾಗಿ ಜನರ ಲಕ್ಷ್ಯವನ್ನು ನವ್ಯ ಹಾಗೂ ವೈಜ್ಞಾನಿಕ ಆರ್ಥಿಕ ಅಭಿವೃದ್ಧಿಯ ದಿಶೆಯಲ್ಲಿ ವಿಚಾರಿಸುವಂತೆ ಮಾಡಿ ಭದ್ರವಾದ ಹಿನ್ನೆಲೆಯೊಂದಿಗೆ ಪ್ರಗತಿಗೆ ಪೂರಕವಾಗುತ್ತದೆ. ಕಾರಣ, ಯಾವುದೇ ಪ್ರದೇಶದಲ್ಲಾದರೂ ಸೇವಾಸಂಸ್ಥೆ ಜನರ ಮಧ್ಯದಲ್ಲಿ ಇರುವುದು ಅತ್ಯಂತ ಅವಶ್ಯ. ಕೋಷ್ಟಕ 1ರಲ್ಲಿ ರಾಜ್ಯದಲ್ಲಿಯ ಬ್ಯಾಂಕುಗಳ ಪ್ರಾದೇಶಿಕ ಹಂಚುವಿಕೆಯನ್ನು ತೋರಿಸಲಾಗಿದೆ.

ಕೋಷ್ಟಕ 1

| ಜಿಲ್ಲೆಗಳು | ಬ್ಯಾಂಕುಗಳು ಸಂಖ್ಯೆ/ಶೇಕಡ |
|---|---|
| ಬೆಂಗಳೂರು | 972 (16.4) |
| ಬೆಳಗಾಂವಿ | 370 (9.0) |
| ಬಳ್ಳಾರಿ | 264 (6.4) |
| ಬೀದರ್ | 81 (1.9) |
| ಬಿಜಾಪುರ | 223 (5.4) |
| ಚಿಕ್ಕಮಗಳೂರು | 113 (2.7) |
| ಚಿತ್ರದುರ್ಗ | 130 (3.2) |
| ದಕ್ಷಿಣ ಕನ್ನಡ | 431 (10.5) |

ಡಾ. ಎಸ್. ಎಸ್. ಹಿರೇಮಠ, ಭೂಗೋಳಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

| | |
|---|---|
| ಧಾರವಾಡ | 364 (8.9) |
| ಗುಲಬರ್ಗ | 153 (3.8) |
| ಹಾಸನ | 138 (3.5) |
| ಕೊಡಗು | 89 (2.2) |
| ಕೋಲಾರ | 116 (2.8) |
| ಮಂಡ್ಯ | 117 (2.9) |
| ಮೈಸೂರು | 235 (5.7) |
| ರಾಯಚೂರು | 158 (3.8) |
| ಶಿವಮೊಗ್ಗ | 152 (3.7) |
| ತುಮಕೂರು | 129 (3.1) |
| ಉತ್ತರಕನ್ನಡ | 167 (4.1) |
| ರಾಜ್ಯದ ಒಟ್ಟು | 4,102 (100.00) |
| ಜಿಲ್ಲಾ ಸರಾಸರಿ | 215.8 |

ರಾಜ್ಯದಲ್ಲಿ ಒಟ್ಟು 4,102 ಬ್ಯಾಂಕುಗಳು ಇವೆಯಾದರೂ ಪ್ರತಿ ಜಿಲ್ಲೆಯಲ್ಲಿಯ ಹಂಚುವಿಕೆ ಸಮನಾಗಿಲ್ಲ. ಪ್ರತಿ ಜಿಲ್ಲೆಯಲ್ಲಿ ಸರಾಸರಿ ಲೆಕ್ಕದ ಪ್ರಕಾರ 215/216 ಇರಬೇಕಾಗಿತ್ತಾದರೂ, ಪ್ರಾದೇಶಿಕ ಭಿನ್ನತೆ ಹಾಗೂ ಇನ್ನುಳಿದ ಕಾರಣದಿಂದ ಹೀಗಾಗಿಲ್ಲ. ಅಷ್ಟೇ ಅಲ್ಲದೆ ಪಟ್ಟಣ ಪ್ರದೇಶ, ಔದ್ಯಮೀಕರಣ ಹಾಗೂ ವಾಣಿಜ್ಯ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ ಜಿಲ್ಲೆಗಳಾದ ಬೆಂಗಳೂರು, ಬೆಳಗಾಂವಿ, ದಕ್ಷಿಣಕನ್ನಡ ಹಾಗೂ ಧಾರವಾಡದಲ್ಲಿ ಹೆಚ್ಚು ಬ್ಯಾಂಕುಗಳು ಕೆಲಸ ಮಾಡುತ್ತ ಇವೆ. ಇನ್ನುಳಿದ ಜಿಲ್ಲೆಗಳಲ್ಲಿ ರಾಜ್ಯದ ಸರಾಸರಿಗಿಂತ ಸ್ವಲ್ಪ ಹೆಚ್ಚು ಅಥವಾ ಕಡಿಮೆ ಸಂಖ್ಯೆಯಲ್ಲಿ ಬ್ಯಾಂಕ್ ಶಾಖೆಗಳಿವೆ. ಆದರೆ ಬೀದರ್ ಮತ್ತು ಕೊಡಗು ಜಿಲ್ಲೆಗಳಲ್ಲಿ ಅತ್ಯಂತ ಕನಿಷ್ಠ ಸಂಖ್ಯೆಯಲ್ಲಿ ಬ್ಯಾಂಕು ಕಛೇರಿಗಳಿವೆ. ಇದಕ್ಕೆ ಪ್ರಾದೇಶಿಕ ವಿಸ್ತೀರ್ಣ, ನಿಸರ್ಗ ಸಂಪತ್ತು ಹಾಗೂ ಆರ್ಥಿಕ ಅಭಿವೃದ್ಧಿಯ ಅಂಶಗಳೇ ಕಾರಣ.

### ಬ್ಯಾಂಕುಗಳು ಹಾಗೂ ಅವುಗಳ ಸೇವಾಪ್ರದೇಶ

ಬ್ಯಾಂಕುಗಳ ಸೇವಾ ಉತ್ಪಾದಕತೆಯ ಮೇಲಿಂದ ಆಯಾ ಪ್ರದೇಶದ ಅಭಿವೃದ್ಧಿ ನಿರ್ಧಾರವಾಗಬಲ್ಲದು. ಯಾಕೆಂದರೆ, ಗ್ರಾಮೀಣ ಭಾಗದಲ್ಲಿ ಬ್ಯಾಂಕುಗಳ ಬಗ್ಗೆ ಜನರಿಗೆ ಇನ್ನೂ ಸಾಕಷ್ಟು ತಿಳುವಳಿಕೆ ಮೂಡಬೇಕಾಗಿದೆ. ಹೀಗಿದ್ದಾಗ ಅಂಥ ಪ್ರತಿ ಸಂಸ್ಥೆಗೂ ಸಾಕಷ್ಟು ಸಣ್ಣ ಸೇವಾ ಪ್ರದೇಶವಿದ್ದರೆ ಗರಿಷ್ಠ ಮಟ್ಟದಲ್ಲಿ ಜನರ ಸಂಪರ್ಕ ಹೊಂದಲು ಸಾಧ್ಯ, ಹಾಗೂ ಜನರಿಗೂ ಬ್ಯಾಂಕಿನ ನಾನಾ ನಮೂನೆಯ ಸೌಲಭ್ಯಗಳ ಪರಿಚಯ ಆಗಬಲ್ಲುದು. ಇದರಿಂದ ಬ್ಯಾಂಕಿನ ಉದ್ದೇಶ ಸಾಧ್ಯವಿದೆಯಲ್ಲದೆ ಪ್ರಾದೇಶಿಕ ಅಭಿವೃದ್ಧಿಯನ್ನು ಕೂಡ ಸಾಧಿಸಬಹುದು. ಕೋಷ್ಟಕ 2ರಲ್ಲಿ ರಾಜ್ಯದ ವಿವಿಧ ಬ್ಯಾಂಕುಗಳ ಪ್ರಾದೇಶಿಕ ಸೇವಾ ಪ್ರದೇಶವನ್ನು ತೋರಿಸಲಾಗಿದೆ.

ರಾಜ್ಯದಲ್ಲಿ ಸದ್ಯಕ್ಕೆ ನಾನಾ ತರಹದ ಬ್ಯಾಂಕುಗಳು ಸೇವೆ ಸಲ್ಲಿಸುತ್ತಿವೆ. ಅವುಗಳಲ್ಲಿ ಪ್ರಮುಖವಾದವು ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಭೂ ಅಭಿವೃದ್ಧಿ ಬ್ಯಾಂಕುಗಳು ಹಾಗೂ ಗ್ರಾಮೀಣ ಬ್ಯಾಂಕುಗಳು. ಎಲ್ಲ ಬ್ಯಾಂಕುಗಳನ್ನು ಗಣನೆಗೆ ತೆಗೆದುಕೊಂಡು ವಿಶ್ಲೇಷಿಸಿದರೆ ಒಂದು ಬ್ಯಾಂಕಿಗೆ 46.8 ಕಿಮೀ. ಸೇವಾ ಪ್ರದೇಶವಿದೆ. ಆದರೆ ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಇದೇ ತೆರನಾಗಿಲ್ಲ.

### ಕೋಷ್ಟಕ 2

ಕರ್ನಾಟಕದಲ್ಲಿ ವಿವಿಧ ಬ್ಯಾಂಕುಗಳ ಸೇವಾ ಪ್ರದೇಶ.

| ಜಿಲ್ಲೆ | ಒಟ್ಟು ಬ್ಯಾಂಕು ಸೇವಾಪ್ರದೇಶ (ಚ.ಕಿಮೀ.) | ವಾ. ಬ್ಯಾ. ಸೇವಾಪ್ರದೇಶ (ಚ.ಕಿಮೀ.) | ಸ. ಬ್ಯಾ. ಸೇವಾಪ್ರದೇಶ (ಚ.ಕಿಮೀ.) | ಭೂ.ಅ.ಬ್ಯಾ. ಸೇವಾಪ್ರದೇಶ (ಚ.ಕಿಮೀ.) |
|---|---|---|---|---|
| ಬೆಂಗಳೂರು | 11.9 | 14.5 | 73.5 | 727.7 |
| ಬೆಳಗಾಂವಿ | 36.3 | 61.5 | 94.5 | 1,341.5 |
| ಬಳ್ಳಾರಿ | 37.5 | 44.1 | 308.9 | 1,235.6 |
| ಬೀದರ | 67.3 | 132.8 | 155.7 | 1,089.6 |
| ಬಿಜಾಪುರ | 76.5 | 135.7 | 198.5 | 1,551.7 |
| ಚಿಕ್ಕಮಗಳೂರು | 63.2 | 85.7 | 342.9 | 900.1 |
| ಚಿತ್ರದುರ್ಗ | 43.5 | 126.2 | 310.0 | 1,205.8 |
| ದ. ಕನ್ನಡ | 19.6 | 22.3 | 191.8 | 1,055.1 |
| ಧಾರವಾಡ | 32.2 | 65.7 | 99.6 | 808.1 |
| ಗುಲಬರ್ಗ | 106.1 | 127.8 | 114.0 | 1,622.4 |
| ಹಾಸನ | 49.4 | 65.5 | 262.0 | 851.7 |
| ಕೊಡಗು | 46.1 | 57.8 | 273.5 | 1,367.3 |
| ಕೋಲಾರ | 70.9 | 93.4 | 483.7 | 747.6 |
| ಮಂಡ್ಯ | 42.4 | 67.9 | 134.0 | 708.7 |
| ಮೈಸೂರು | 50.9 | 66.9 | 426.9 | 1,086.7 |
| ರಾಯಚೂರು | 88.7 | 122.9 | 400.5 | 1,557.4 |
| ಶಿವಮೊಗ್ಗ | 69.4 | 92.6 | 376.9 | 1,055.3 |
| ತುಮಕೂರು | 82.2 | 113.9 | 441.6 | 1,059.8 |
| ಉ. ಕನ್ನಡ | 61.6 | 97.1 | 205.8 | 935.6 |
| ಒಟ್ಟು | 46.8 | 63.8 | 208.9 | 1,083.6 |

ಅತಿ ಚಿಕ್ಕ ಸೇವಾ ಪ್ರದೇಶ ಇರುವುದು ಬೆಂಗಳೂರು ಜಿಲ್ಲೆಯಲ್ಲಿ. ಗುಲಬರ್ಗ ಜಿಲ್ಲೆಯ ಪ್ರತಿ ಬ್ಯಾಂಕು ಕಛೇರಿಗೂ ರಾಜ್ಯದಲ್ಲಿಯೇ ಅತಿ ಗರಿಷ್ಠ ಸೇವಾ ಪ್ರದೇಶವಿದೆ. ಇನ್ನು ರಾಜ್ಯದ 12 ಜಿಲ್ಲೆಗಳು ರಾಜ್ಯದ ಸರಾಸರಿಗಿಂತ ಹೆಚ್ಚು ಸೇವಾ ಪ್ರದೇಶ ಹೊಂದಿವೆಯಾದರೆ ಇನ್ನುಳಿದ ಜಿಲ್ಲೆಗಳು ರಾಜ್ಯದ ಸರಾಸರಿಗಿಂತ ಕಡಿಮೆ ಸೇವಾ ಪ್ರದೇಶ ಹೊಂದಿವೆ.

ವಿವಿಧ ಬ್ಯಾಂಕು ಕಛೇರಿಗಳ ಸೇವಾ ಪ್ರದೇಶದ ಅವಲೋಕನೆ ಆಯಾ ಬ್ಯಾಂಕು ಕಛೇರಿಗಳ ಪ್ರಾದೇಶಿಕ ಪ್ರಾಮುಖ್ಯವನ್ನು ಹಾಗೂ ಬ್ಯಾಂಕು ಕಛೇರಿಗಳ ಸ್ಥಾಪನಾ ಯೋಜನೆಯ ಉದ್ದೇಶ ಹಾಗೂ ಕ್ರಮವನ್ನು ನಿರ್ದಿಷ್ಟವಾಗಿ ತೋರಿಸುತ್ತದೆ. ವಾಣಿಜ್ಯ ಬ್ಯಾಂಕೊಂದು ರಾಜ್ಯದಲ್ಲಿ ಸರಾಸರಿ 64 ಚ.ಕಿಮೀ. ಸೇವಾ ಪ್ರದೇಶ ಹೊಂದಿದ್ದರೆ ಸಹಕಾರಿ ಬ್ಯಾಂಕು 209 ಚ.ಕಿಮೀ. ಹೊಂದಿದೆಯಲ್ಲದೆ ಭೂ ಅಭಿವೃದ್ಧಿ ಬ್ಯಾಂಕು 1,084 ಚ.ಕಿಮೀ. ಪ್ರದೇಶದಲ್ಲಿ ಸೇವೆ ಸಲ್ಲಿಸುತ್ತದೆ. ಎಲ್ಲ ಬ್ಯಾಂಕುಗಳೂ ತಂತಮ್ಮ ವಿಶಿಷ್ಟ ವಾಣಿಜ್ಯ ರೀತಿಯಂತೆ ಸೇವೆ ಸಲ್ಲಿಸುತ್ತಿದ್ದರೂ ಕೆಲ ವಿಷಯದಲ್ಲಿ ಸಾಮ್ಯತೆ ತೋರಿಸುತ್ತಾ ಇವೆ. ರಾಜ್ಯದಲ್ಲಿ ಗ್ರಾಮೀಣ ಹಾಗೂ ಕೃಷಿ ಅಭಿವೃದ್ಧಿಗೆ, ವಾಣಿಜ್ಯ ಹಾಗೂ ಕೈಗಾರಿಕೀಕರಣಕ್ಕೆ ಕೊಟ್ಟ ಪ್ರಾಮುಖ್ಯವನ್ನು ಕೊಡಲಾಗಿಲ್ಲವೆಂಬುದನ್ನು ಮೇಲಿನ ವಿವರಣೆ ದೃಢಪಡಿಸುತ್ತದೆ. ಇತ್ತೀಚಿನ

ವರ್ಗಗಳಲ್ಲಿ ಈ ಮೇಲಿನ ಅಂತರವನ್ನು ಕಡಿಮೆಗೊಳಿಸುವುದಕ್ಕಾಗಿ ಸಾಕಷ್ಟು ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಗಿದೆ.

**ಬ್ಯಾಂಕುಗಳು ಹಾಗೂ ಜನಸಂಖ್ಯೆ**

ಸೇವಾ ದೃಷ್ಟಿಯಿಂದ ಜನಸಂಖ್ಯೆಯ ಒತ್ತಡ ಕಡಿಮೆ ಇರುವುದು ಬ್ಯಾಂಕುಗಳ ಉದ್ದೇಶಸಾಧನೆಗೆ ಹೆಚ್ಚು ಸಹಾಯಕವಾಗುತ್ತದೆ. ಎಲ್ಲಿ ಹೆಚ್ಚು ಜನರು ಒಂದೇ ಬ್ಯಾಂಕನ್ನು ಹಣಕಾಸಿನ ವ್ಯವಹಾರಕ್ಕಾಗಿ ಅವಲಂಬಿಸಬೇಕಾಗುತ್ತದೆಯೋ ಅಲ್ಲಿ ಜನರಿಗೆ ಸಾಕಷ್ಟು ವೇಳೆಯ ಹರಣವಾಗುತ್ತದೆಯಲ್ಲದೆ ಇನ್ನುಳಿದ ಆರ್ಥಿಕ ವಹಿವಾಟಿಗೂ ತೊಂದರೆಯಾಗುತ್ತದೆ. ಕೆಲವೇಳೆ ಇಂಥ ಪರಿಸ್ಥಿತಿ ಸಾಂಪ್ರದಾಯಿಕ ಖಾಸಗಿ ಹಣಕಾಸಿನ ನೆರವನ್ನು ಅವಲಂಬಿಸಿ ಹೆಚ್ಚು ಬಡ್ಡಿ ತೆರುವಂತೆ ಮಾಡುತ್ತದೆಯಲ್ಲದೆ ಬಹಳಷ್ಟು ಜನರು ಈ ಎರಡಕ್ಕೂ ಮೊರೆಹೋಗದೆ ತಟಸ್ಥರಾಗಿ ಉಳಿಯುವಂತಾಗಿ ಅವಶ್ಯವಿದ್ದ ಹಣದ ಮುಗಟ್ಟಿನಿಂದ ತಮ್ಮ ಹಾಗೂ ತನ್ಮೂಲಕ ರಾಜ್ಯದ ಮತ್ತು ಪ್ರಾದೇಶಿಕ ಅನಭಿವೃದ್ಧಿಗೆ ಕಾರಣವಾಗುವಂತಾಗುತ್ತದೆ. ಆದ್ದರಿಂದ ಸಾಧ್ಯವಿದ್ದ ಮಟ್ಟಿಗೆ ಅತಿ ಕಡಿಮೆ ಜನರಿಗೆ ಒಂದು ಬ್ಯಾಂಕು ಇದ್ದರೆ ಹೆಚ್ಚು ಹೆಚ್ಚು ಜನರಿಗೆ ಹಣಕಾಸಿನ ನೆರವು ಒದಗಿಸಲು ಹಾಗೂ ಜನರಿಂದ ಹಣ ಸಂಗ್ರಹ ಮಾಡಲು ಸಹಾಯವಾಗುತ್ತದೆ. ರಾಜ್ಯದಲ್ಲಿ ಜನಸಂಖ್ಯೆ ಹಾಗೂ ಬ್ಯಾಂಕುಗಳ ನಡುವಣ ಸಂಬಂಧವನ್ನು ಕೋಷ್ಟಕ 3ರಲ್ಲಿ ತೋರಿಸಲಾಗಿದೆ.

ಕೋಷ್ಟಕ 3

| ಜಿಲ್ಲೆಗಳು | ಜನಸಂಖ್ಯೆಯ ಒತ್ತಡ (000ದಲ್ಲಿ) |
|---|---|
| ಬೆಂಗಳೂರು | 7.3 |
| ಬೆಳಗಾಂವಿ | 8.0 |
| ಬಳ್ಳಾರಿ | 5.6 |
| ಬೀದರ್ | 12.3 |
| ಬಿಜಾಪುರ | 10.8 |
| ಚಿಕ್ಕಮಗಳೂರು | 8.0 |
| ಚಿತ್ರದುರ್ಗ | 13.7 |
| ದಕ್ಷಿಣ ಕನ್ನಡ | 5.5 |
| ಧಾರವಾಡ | 8.0 |
| ಗುಲಬರ್ಗ | 13.6 |
| ಹಾಸನ | 9.8 |
| ಕೊಡಗು | 5.2 |
| ಕೋಲಾರ | 16.4 |
| ಮಂಡ್ಯ | 12.1 |
| ಮೈಸೂರು | 11.0 |
| ರಾಯಚೂರು | 11.3 |
| ಶಿವಮೊಗ್ಗ | 10.9 |
| ತುಮಕೂರು | 15.3 |
| ಉತ್ತರ ಕನ್ನಡ | 6.4 |
| ರಾಜ್ಯದ ಒಟ್ಟು | 9.0 |

ಕರ್ನಾಟಕದಲ್ಲಿ ಸರಾಸರಿ 9,000 ಜನರಿಗೆ ಒಂದು ಬ್ಯಾಂಕು ಇದೆ. ರಾಜ್ಯದ ಇನ್ನುಳಿದ ಜಿಲ್ಲೆಗಳಲ್ಲಿ ಈ ತರಹದ ಹೊಂದಾಣಿಕೆ ಇಲ್ಲ. ದಕ್ಷಿಣ ಕನ್ನಡ, ಬಳ್ಳಾರಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ 5,000 ದಿಂದ 6,000 ಜನರಿಗೆ ಒಂದು ಬ್ಯಾಂಕು ಇದೆ. ಆದರೆ ಕೋಲಾರ, ತುಮಕೂರು, ಚಿತ್ರದುರ್ಗ ಹಾಗೂ ಗುಲಬರ್ಗ ಜಿಲ್ಲೆಗಳಲ್ಲಿ 16,000ದಿಂದ 13,000 ಜನರಿಗೆ ಒಂದು ಬ್ಯಾಂಕು ಸೇವೆ ಸಲ್ಲಿಸುತ್ತಿದೆ. ಇನ್ನುಳಿದ ಜಿಲ್ಲೆಗಳಲ್ಲಿ ರಾಜ್ಯದ ಸರಾಸರಿಗಿಂತ ಸ್ವಲ್ಪ ಹೆಚ್ಚು ಅಥವಾ ಕಡಿಮೆ ಜನಸಂಖ್ಯೆಗೆ ಒಂದು ಬ್ಯಾಂಕು ಸೇವೆ ಸಲ್ಲಿಸುತ್ತಿದೆ. ಪ್ರಾದೇಶಿಕ ಅಭಿವೃದ್ಧಿಯ ದೃಷ್ಟಿಯಿಂದ ಕೋಲಾರ, ತುಮಕೂರು, ಗುಲಬರ್ಗ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚು ಬ್ಯಾಂಕುಗಳ ಸ್ಥಾಪನೆ ಅವಶ್ಯವಾಗಿದೆ.

**ಬ್ಯಾಂಕುಗಳ ಕೇಂದ್ರೀಕರಣ ಹಾಗೂ ಪ್ರಾದೇಶಿಕ ಅಭಿವೃದ್ಧಿ**

ಬ್ಯಾಂಕುಗಳ ಕಚೇರಿಗಳು ಪ್ರಾದೇಶಿಕ ಅಭಿವೃದ್ಧಿಗೆ ಬೇಕಾದ ಹಣಕಾಸಿನ ನೆರವನ್ನು ವೈಯಕ್ತಿಕವಾಗಿ ಆಸಕ್ತಿಯುಳ್ಳ ಜನರಿಗೆ ನೀಡುತ್ತವೆ. ಇಂತಹ ಹಣಕಾಸಿನ ನೆರವು ಆಯಾ ಸ್ಥಾನಿಕ ಪ್ರದೇಶಗಳ ಬೆಳವಣಿಗೆಯನ್ನು ತೀವ್ರಗೊಳಿಸಿ ಆರ್ಥಿಕವಾಗಿ ಸಂಪದ್ಭರಿತವನ್ನಾಗಿಸುತ್ತದೆ. ಈ ತೆರನಾದ ಬ್ಯಾಂಕುಗಳ ಸಂಖ್ಯೆ ಆಯಾ ಪ್ರದೇಶದ ಪ್ರಗತಿಯ ಪ್ರತೀಕವಾಗಿವೆ ಎಂದು ಹೇಳಿದರೆ ತಪ್ಪಾಗಲಾರದು. ಪ್ರಾರಂಭದಲ್ಲಿ ಈ ರೀತಿಯಾದರೆ ಕಾಲ ಕಳೆದಂತೆ ಪ್ರಾದೇಶಿಕ ಚಿತ್ರವೇ ಬೇರೆಯಾಗಿ ಅಭಿವೃದ್ಧಿ ಹೊಂದಿದ ಸ್ಥಳದಲ್ಲಿಯೇ ಹೆಚ್ಚು ಬ್ಯಾಂಕು ಕಚೇರಿಗಳನ್ನು ಸ್ಥಾಪಿಸಲಾಗಿದೆಯೋ ಏನೋ ಎನ್ನುವಂತಾಗುತ್ತದೆ. ಅಭಿವೃದ್ಧಿಗೆ ಹಣದ ಸಹಾಯ ಪೂರಕವಾಗಿ, ಮುಂದೆ ಅಭಿವೃದ್ಧಿ ಹೆಚ್ಚು ಹಣದ ಚಲಾವಣೆ ಹಾಗೂ ಸಂಗ್ರಹಕ್ಕೆ ಕಾರಣವಾಗಿ, ಅಂಥ ಪ್ರದೇಶದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುತ್ತದೆ. ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಈ ತೆರನಾದ ಪ್ರಗತಿ ಸಾಧಿಸಬಲ್ಲ ಪ್ರದೇಶಗಳು ಹೇರಳವಾಗಿವೆ. ಆದರೆ ಅಂಥ ಪ್ರದೇಶಗಳನ್ನು ಗುರುತಿಸಿ ಹಣಕಾಸಿನ ನೆರವನ್ನು ಹೆಚ್ಚಿನ ಪ್ರಮಾಣದಲ್ಲಿ ಪೂರೈಸುವುದು ಅತ್ಯಂತ ಅವಶ್ಯವಾಗಿದೆ. ರಾಜ್ಯದಲ್ಲಿಯ ಬ್ಯಾಂಕು ಕಚೇರಿಗಳ ಕೇಂದ್ರೀಕರಣ ಪ್ರಾದೇಶಿಕ ಹಣಕಾಸಿನ ವ್ಯವಹಾರ ಹಾಗೂ ಅಭಿವೃದ್ಧಿಯ ಭವಸಾಮರ್ಥ್ಯವಿರುವ ಪ್ರದೇಶದ ವಿವರಗಳನ್ನು ಕೋಷ್ಟಕ 4 ತೋರಿಸುತ್ತದೆ.

ರಾಜ್ಯದಲ್ಲಿ ಬ್ಯಾಂಕುಗಳ ಕೇಂದ್ರೀಕರಣ ಕೇವಲ ಕೆಲವು ಜಿಲ್ಲೆಗಳಲ್ಲಿ ಮಾತ್ರ ಕಂಡುಬರುತ್ತದೆ. ಈ ದಿಶೆಯಲ್ಲಿ ಬೆಂಗಳೂರು ಜಿಲ್ಲೆ ಪ್ರಥಮವಾದರೆ ದಕ್ಷಿಣ ಕನ್ನಡ, ಧಾರವಾಡ, ಬೆಳಗಾಂವಿ, ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಗಳು ತದನಂತರದ ಸ್ಥಾನ ಹೊಂದಿವೆ. ಬ್ಯಾಂಕುಗಳು ಆರ್ಥಿಕ ವ್ಯವಸ್ಥೆಯ ಚೇತನಕ್ಕೆ ಹೇಗೆ ಸಹಾಯ ಮಾಡುತ್ತಿವೆಯೋ ಅಂತೆಯೇ ಅದಕ್ಕೆ ಅವಶ್ಯವಿದ್ದ ಹಣವನ್ನು ಕೂಡ ಸಂಗ್ರಹಿಸಬಲ್ಲುವು. ರಾಜ್ಯದಲ್ಲಿ ಎಲ್ಲ ಬ್ಯಾಂಕುಗಳು ಒಟ್ಟು ರೂ. 940 ಕೋಟಿ ಸಂಗ್ರಹಿಸಿವೆ. ಬೆಂಗಳೂರು ವಿಭಾಗ ಅತಿ ಹೆಚ್ಚಿನ ಸಂಗ್ರಹ ಮಾಡಿ ಪ್ರಥಮ ಸ್ಥಾನ ಗಳಿಸಿದರೆ, ಮೈಸೂರು, ಬೆಳಗಾಂವಿ ಮತ್ತು ಗುಲಬರ್ಗ ವಿಭಾಗಗಳು ಅನುಕ್ರಮವಾಗಿ ಅನಂತರದ ಸ್ಥಾನ ಪಡೆದುಕೊಂಡಿವೆ. ರಾಜ್ಯದಲ್ಲಿಯೇ ಬೆಂಗಳೂರು ಜಿಲ್ಲೆ ಅತಿ ಹೆಚ್ಚು ಹಣ ಸಂಗ್ರಹಿಸಿದೆ (ರೂ. 398 ಕೋಟಿ). ಅನಂತರ ಬರುವ ಜಿಲ್ಲೆಗಳೆಂದರೆ ದಕ್ಷಿಣಕನ್ನಡ (ರೂ. 120 ಕೋಟಿ), ಮೈಸೂರು (ರೂ. 55 ಕೋಟಿ), ಧಾರವಾಡ (ರೂ. 54 ಕೋಟಿ),

## ಕೋಷ್ಟಕ 4

| ಜಿಲ್ಲೆಗಳು/ವಿಭಾಗ | ಬ್ಯಾಂಕುಗಳು | ಹಣದ ಸಂಗ್ರಹ (ಲಕ್ಷ ರೂ.) | ಹಣದ ವಿತರಣೆ (ಲಕ್ಷ ರೂ.) | ಪ್ರತಿ ಬ್ಯಾಂಕಿನ ಹಣದ ಸಂಗ್ರಹ ಹಾಗೂ ವಿತರಣೆ (ಲಕ್ಷ ರೂ.) | | ಅಭಿವೃದ್ಧಿಯ ಭವ ಸಾಮರ್ಥ್ಯ ಪ್ರದೇಶ |
|---|---|---|---|---|---|---|
| ಬೆಂಗಳೂರು ವಿಭಾಗ | 726 | 47,411 | 51,546 | 66.7 | 71.0 | |
| ಬೆಂಗಳೂರು | 446 | 39,835 | 43,814 | 89.3 | 98.2 | |
| ಚಿತ್ರದುರ್ಗ | 61 | 1,619 | 2,404 | 26.5 | 39.4 | |
| ಕೋಲಾರ | 58 | 1,644 | 1,094 | 28.3 | 18.8 | * |
| ಶಿವಮೊಗ್ಗ | 101 | 2,676 | 3,064 | 26.4 | 30.3 | |
| ತುಮಕೂರು | 60 | 1,632 | 1,170 | 27.4 | 19.5 | * |
| ಬೆಳಗಾಂವಿ ವಿಭಾಗ | 475 | 16,410 | 9,783 | 34.5 | 2.6 | * |
| ಬೆಳಗಾಂವಿ | 144 | 6,096 | 3,409 | 42.3 | 26.6 | * |
| ಬಿಜಾಪುರ | 86 | 2,239 | 1,416 | 26.0 | 16.4 | * |
| ಧಾರವಾಡ | 154 | 5,483 | 3,996 | 35.6 | 25.9 | * |
| ಉ. ಕನ್ನಡ | 91 | 2,592 | 962 | 28.5 | 10.6 | * |
| ಗುಲಬರ್ಗ ವಿಭಾಗ | 215 | 4,892 | 5,002 | 22.7 | 23.2 | |
| ಬಳ್ಳಾರಿ | 78 | 1,894 | 2,434 | 24.3 | 31.2 | |
| ಬೀದರ್ | 23 | 436 | 264 | 18.9 | 11.5 | * |
| ಗುಲಬರ್ಗ | 46 | 1,253 | 678 | 27.2 | 14.7 | * |
| ರಾಯಚೂರು | 68 | 1,309 | 1,626 | 19.3 | 23.9 | |
| ಮೈಸೂರು ವಿಭಾಗ | 702 | 25,322 | 16,286 | 36.0 | 23.2 | * |
| ಚಿಕ್ಕಮಗಳೂರು | 67 | 2,223 | 1,610 | 33.7 | 24.0 | * |
| ದ. ಕನ್ನಡ | 329 | 12,068 | 7,847 | 36.7 | 23.8 | * |
| ಹಾಸನ | 66 | 1,989 | 1,343 | 30.1 | 20.3 | * |
| ಕೊಡಗು | 60 | 2,477 | 908 | 41.3 | 15.1 | * |
| ಮಂಡ್ಯ | 51 | 974 | 938 | 19.0 | 18.4 | * |
| ಮೈಸೂರು | 129 | 5,591 | 3,640 | 43.3 | 28.2 | * |
| ರಾಜ್ಯದ ಒಟ್ಟು | 2118 | 94,035 | 83,617 | 44.4 | 39.4 | |
| ರಾಜ್ಯದ ಸರಾಸರಿ | | 4,949.2 | 4,408.9 | | | |

ಶಿವಮೊಗ್ಗ (ರೂ. 26 ಕೋಟಿ), ಉತ್ತರ ಕನ್ನಡ (ರೂ. 25 ಕೋಟಿ) ಮತ್ತು ಕೊಡಗು (ರೂ. 24 ಕೋಟಿ). ರಾಜ್ಯದ ಜಿಲ್ಲೆಗಳ ಸರಾಸರಿ ಸಂಗ್ರಹ ರೂ. 49 ಕೋಟಿ. 4 ಜಿಲ್ಲೆಗಳು ಸರಾಸರಿಗಿಂತ ಹೆಚ್ಚು ಸಂಗ್ರಹಿಸಿವೆ. ಆದರೆ, ಇನ್ನುಳಿದ 15 ಜಿಲ್ಲೆಗಳು ಸರಾಸರಿಗಿಂತ ಕಡಿಮೆ ಹಣ ಸಂಗ್ರಹಿಸಿವೆ. ಈ ಹಣದ ಸಂಗ್ರಹಣೆಯೂ ಆಯಾ ಜಿಲ್ಲೆಯ ಆರ್ಥಿಕ ಹಾಗೂ ಕೈಗಾರಿಕಾ ಪ್ರಗತಿಯನ್ನು ಬಿಂಬಿಸುತ್ತದೆ.

ಬ್ಯಾಂಕು ಕಛೇರಿಗಳ ಸ್ಥಾಪನೆಯ ಉದ್ದೇಶ ಹಣದ ಸಹಾಯ ಒದಗಿಸುವುದೇ ಆದರೂ ಅದರೊಂದಿಗೆ ಅವು ಹಣ ಸಂಗ್ರಹ ಮಾಡಿ ಪರ್ಯಾಯವಾಗಿ ಹಣದುಬ್ಬರವನ್ನೂ ನಿಯಂತ್ರಿಸಬಲ್ಲುವು. ಇನ್ನು ಹಣದ ಸಹಾಯ ಪ್ರಾದೇಶಿಕ ಆರ್ಥಿಕ ಅಭಿವೃದ್ಧಿಗೆ ಹೇಗೆ ಪ್ರೇರಕವಾಗಬಲ್ಲದು ಎಂಬುದನ್ನು ಇಲ್ಲಿ ಅವಲೋಕಿಸೋಣ. ಹಣದ ಚಲಾವಣೆ ಹಾಗೂ ಉಪಯೋಗ ಎಲ್ಲಿ ಹೆಚ್ಚು ಇರುತ್ತದೆಯೋ ಅಂಥ ಅಭಿವೃದ್ಧಿ ಹೆಚ್ಚು ತೀವ್ರವಾಗಿರುವುದು ಸಾಮಾನ್ಯ. ಈ ದಿಶೆಯಲ್ಲಿ ನೋಡಿದರೆ ಬೆಂಗಳೂರು ವಿಭಾಗ ಹೆಚ್ಚು ಅಭಿವೃದ್ಧಿ ಹೊಂದಿದ ಪ್ರದೇಶವಾಗಿದೆ. ಇನ್ನು ಮೈಸೂರು ಮತ್ತು ಬೆಳಗಾಂವಿ ವಿಭಾಗಗಳು ಸಾಮಾನ್ಯ ಅಭಿವೃದ್ಧಿ ಸಾಧಿಸಿವೆಯಾದರೆ ಗುಲಬರ್ಗ ವಿಭಾಗ ಅತಿ ಕಡಿಮೆ ಅಭಿವೃದ್ಧಿ ಸಾಧಿಸಿದೆ. ಪ್ರತಿ ಜಿಲ್ಲೆಯ ಅಭಿವೃದ್ಧಿ ಚಿತ್ರಣವು ಇನ್ನೂ ವಿಭಿನ್ನವಾಗಿದೆ. ಇಲ್ಲಿಯೂ ಬೆಂಗಳೂರು ಜಿಲ್ಲೆ ಪ್ರಥಮವಾದರೆ ದಕ್ಷಿಣಕನ್ನಡ, ಧಾರವಾಡ, ಮೈಸೂರು ಹಾಗೂ ಬೆಳಗಾಂವಿ ಜಿಲ್ಲೆಗಳು ತದನಂತರದ ಸ್ಥಾನ ಹೊಂದಿವೆ.

ಮೇಲಿನ ವಿಶ್ಲೇಷಣೆಯ ಸಹಾಯದಿಂದ ಅಭಿವೃದ್ಧಿಯಾಗಬಲ್ಲ ಪ್ರದೇಶಗಳನ್ನು ಗುರುತಿಸಬಹುದು. ಸಾಮಾನ್ಯವಾಗಿ ಎಲ್ಲಿ ಹಣದ ಕೊರತೆಯಿದೆಯೋ ಅಂಥಲ್ಲಿ ಅಭಿವೃದ್ಧಿ ಸಾಮಾನ್ಯ ಅಥವಾ ಅದಕ್ಕಿಂತ ಹೆಚ್ಚು ಇರುವ ಸಾಧ್ಯತೆ ಇದೆ. ಇದು ಪ್ರಾದೇಶಿಕ ಸಂಪನ್ಮೂಲಗಳನ್ನು ಹಾಗೂ ವಾತಾವರಣವನ್ನು ಅವಲಂಬಿಸಿರುತ್ತದೆ. ಈ ದೃಷ್ಟಿಯಲ್ಲಿ ರಾಜ್ಯದ ವಿವಿಧ ಭಾಗಗಳನ್ನು ಪರೀಕ್ಷಿಸಿದರೆ ಒಟ್ಟು 16 ಜಿಲ್ಲೆಗಳು ಅಭಿವೃದ್ಧಿಯ ಭವಸಾಮರ್ಥ್ಯವುಳ್ಳ ಪ್ರದೇಶಗಳೆಂದು ಗುರುತಿಸಬಹುದು. ವಿವಿಧ ವಿಭಾಗಗಳ ಅಭಿವೃದ್ಧಿಯ ಜಿಲ್ಲೆಗಳಾವುವೆಂದರೆ

ಬೆಂಗಳೂರು ವಿಭಾಗದಲ್ಲಿ ಕೋಲಾರ ಮತ್ತು ತುಮಕೂರು ಜಿಲ್ಲೆಗಳು; ಬೆಳಗಾಂವಿ ವಿಭಾಗದಲ್ಲಿ ಬೆಳಗಾಂವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ; ಗುಲಬರ್ಗ ವಿಭಾಗದಲ್ಲಿ ಗುಲಬರ್ಗ ಮತ್ತು ಬೀದರ್ ; ಮೈಸೂರು ವಿಭಾಗದಲ್ಲಿ ಚಿಕ್ಕಮಗಳೂರು, ದ. ಕನ್ನಡ, ಹಾಸನ, ಕೊಡಗು, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳು. ರಾಜ್ಯದ ಒಟ್ಟು 4 ವಿಭಾಗಗಳಲ್ಲಿ ಬೆಳಗಾಂವಿ ಹಾಗೂ ಮೈಸೂರು ವಿಭಾಗಗಳು ಅಭಿವೃದ್ಧಿಯ ಅವಕಾಶವನ್ನು ಸಾಕಷ್ಟು ಹೊಂದಿವೆಯೆಂದು ಹೇಳಬಹುದು.

### ಪ್ರಾದೇಶಿಕ ಅಭಿವೃದ್ಧಿಯ ಸ್ಥೂಲ ಚಿತ್ರ

ಈ ಹಿಂದೆ ಪ್ರಾದೇಶಿಕ ಅಭಿವೃದ್ಧಿಯನ್ನು ಬ್ಯಾಂಕು ಕಛೇರಿಗಳ ಸಂಖ್ಯೆಯ ಆಧಾರದ ಮೇಲಿಂದ ನೋಡಿದೆವು. ಇಲ್ಲಿ ಜನರ ಒಟ್ಟು ವೈಯಕ್ತಿಕ ವರಮಾನದೊಂದಿಗೆ ನೋಡೋಣ. ವೈಯಕ್ತಿಕ ವರಮಾನ, ವ್ಯಕ್ತಿಯ ಆರ್ಥಿಕ ಪ್ರಜ್ಞೆ, ಹಾಗೂ ಕಾರ್ಯಕ್ಷಮತೆ, ಆರ್ಥಿಕ ಚಟುವಟಿಕೆಗೆ ಲಭ್ಯವಿರುವ ನಿಸರ್ಗ ಸಂಪತ್ತು ಮತ್ತು ಅವುಗಳ ಉಪಯೋಗ, ಅಲ್ಲದೆ ಎರಡಕ್ಕೂ ಚಾಲನೆ ಕೊಡುವ ಹಣಕಾಸಿನ ಸೌಲಭ್ಯವನ್ನು ಹೆಚ್ಚು ಪಾಲು ಅವಲಂಬಿಸಿರುತ್ತದೆ. ರಾಜ್ಯದಲ್ಲಿ ಬ್ಯಾಂಕುಗಳು ಸಾಕಷ್ಟು ಪ್ರಮಾಣದಲ್ಲಿ ಹಣಕಾಸು ನೆರವು ನೀಡಿರುವುದನ್ನು ನೋಡಿದ್ದೇವೆ. ಈ ಸಹಾಯ ರಾಜ್ಯದಲ್ಲಿಯ ಪ್ರಾದೇಶಿಕ ಅಭಿವೃದ್ಧಿಯನ್ನು ಇನ್ನುಳಿದ ಅಂಶಗಳೊಂದಿಗೆ ಎಷ್ಟರ ಮಟ್ಟಿಗೆ ಸಾಧಿಸಿದೆ ಎಂಬುದನ್ನು ಪ್ರೊ. ವಿಲಿಯಮ್ ಸನ್ ಅವರ ಅಭಿವೃದ್ಧಿಯ ಅಸಮತೋಲತೆಯ ಸೂತ್ರವನ್ನುಪಯೋಗಿಸಿ ವಿಶ್ಲೇಷಿಸಲಾಗಿದೆ. ರಾಜ್ಯದಲ್ಲಿಯ ಪ್ರಾದೇಶಿಕ ಅಭಿವೃದ್ಧಿಯ ಅಸಮತೋಲತೆಯನ್ನು ಕೋಷ್ಟಕ 5 ತೋರಿಸುತ್ತದೆ.

ಕೋಷ್ಟಕ 5

| ಜಿಲ್ಲೆಗಳು | ಅಸಮತೆಯ ಸೂಚಿ |
|---|---|
| ಬೆಂಗಳೂರು | 0.07 |
| ಬೆಳಗಾಂವಿ | 0.05 |
| ಬಳ್ಳಾರಿ | 0.00 |
| ಬೀದರ್ | 0.04 |
| ಬಿಜಾಪುರ | 0.08 |
| ಚಿಕ್ಕಮಗಳೂರು | 0.04 |
| ಚಿತ್ರದುರ್ಗ | 0.00 |
| ದ. ಕನ್ನಡ | 0.04 |
| ಧಾರವಾಡ | 0.06 |
| ಗುಲಬರ್ಗ | 0.07 |
| ಹಾಸನ | 0 07 |
| ಕೊಡಗು | 0.15 |
| ಕೋಲಾರ | 0.05 |
| ಮಂಡ್ಯ | 0.01 |
| ಮೈಸೂರು | 0.02 |
| ರಾಯಚೂರು | 0.03 |
| ಶಿವಮೊಗ್ಗ | 0.06 |
| ತುಮಕೂರು | 0.03 |
| ಉ. ಕನ್ನಡ | 0.05 |

ರಾಜ್ಯದಲ್ಲಿ ಅಭಿವೃದ್ಧಿಯ ಅಸಮತೆ ಬಹಳಷ್ಟಿಲ್ಲ. ಆದಾಗ್ಯೂ ಇದು 0.15ದಿಂದ 0.08ರಷ್ಟು ಇರುವುದು ಕಂಡುಬರುತ್ತದೆ. ಅಲ್ಪ ಅಭಿವೃದ್ಧಿ ಅಸಮಾನತೆಯುಳ್ಳ ಜಿಲ್ಲೆಗಳೆಂದರೆ ಬೆಂಗಳೂರು, ಹಾಸನ, ಶಿವಮೊಗ್ಗ, ಧಾರವಾಡ, ಬಿಜಾಪುರ ಮತ್ತು ಗುಲಬರ್ಗ. ಮಧ್ಯಮ ಪ್ರಮಾಣದ ಅಸಮತೋಲನವುಳ್ಳ ಜಿಲ್ಲೆಗಳೆಂದರೆ ಬೆಳಗಾಂವಿ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೋಲಾರ, ರಾಯಚೂರು, ಬೀದರ್ ಇತ್ಯಾದಿ. ರಾಜ್ಯದಲ್ಲಿ ಹೆಚ್ಚಿನ ಅಸಮಾನತೆ ಹೊಂದಿದ ಜಿಲ್ಲೆಯೆಂದರೆ ಕೊಡಗು. ಕಡಿಮೆ ಪ್ರಮಾಣದ ಅಭಿವೃದ್ಧಿ ಅಸಮಾನತೆಯಿರುವ ಜಿಲ್ಲೆಗಳಲ್ಲಿ ಹೆಚ್ಚು ಬ್ಯಾಂಕು ಶಾಖೆಗಳಿವೆ. ಸಾಕಷ್ಟು ಪ್ರಮಾಣದ ಹಣಕಾಸಿನ ಸೌಲಭ್ಯ ಒದಗಿಸಿರುವುದೇ ಇದಕ್ಕೆ ಕಾರಣವೆಂದು ಹೇಳಬಹುದು. ತೃತೀಯ ಜಗತ್ತಿನ ಪ್ರಾದೇಶಿಕ ಅಭಿವೃದ್ಧಿಯಲ್ಲಿ ಇನ್ನುಳಿದ ಅಂಶಗಳಿಗಿಂತ ಹೆಚ್ಚಿನ ಪ್ರಾಮುಖ್ಯವನ್ನು ಹಣಕಾಸಿನ ಸೌಲಭ್ಯ ಪಡೆಯುತ್ತದೆ. ಆದ್ದರಿಂದ ಹೆಚ್ಚು ಬ್ಯಾಂಕುಗಳ ಸ್ಥಾಪನೆ ಹಾಗೂ ಹಣಕಾಸಿನ ಲಭ್ಯತೆಯು ಪ್ರಾದೇಶಿಕ ಅಭಿವೃದ್ಧಿಯನ್ನು ಹೆಚ್ಚು ತ್ವರಿತಗೊಳಿಸಬಲ್ಲುದು.

### ಬ್ಯಾಂಕುಗಳ ಪ್ರಾದೇಶಿಕ ಬೇಡಿಕೆ

ಬ್ಯಾಂಕುಗಳನ್ನು ಬಹುಶಃ ವೈಜ್ಞಾನಿಕ ವಿಧಾನದಲ್ಲಿಯೇ ಸ್ಥಾಪಿಸಲಾಗುತ್ತದೆಯಾದರೂ ಕರ್ನಾಟಕದ ಬ್ಯಾಂಕುಗಳ ಪ್ರಾದೇಶಿಕ ಪರಿಸರಣ ಇದನ್ನು ಅಷ್ಟಾಗಿ ಎತ್ತಿ ತೋರಿಸುತ್ತಿಲ್ಲ. ಈ ಹಿಂದೆ ಈ ತೆರನಾದ ಆವಶ್ಯಕತೆ ಇರದೇ ಇದ್ದದ್ದು ಒಂದು ಕಾರಣ ಇರಬಹುದು. ಆದರೆ ಜನಸಂಖ್ಯೆ ಬೆಳೆದಂತೆ ಹಾಗೂ ವೇಳೆಯ ಮಹತ್ವ ಹೆಚ್ಚಿದಂತೆ ಮತ್ತು ಜನರಿಗೆ ಸೌಕರ್ಯ ಒದಗಿಸುವ ಉದ್ದೇಶವನ್ನು ಸಾಧಿಸಲು ಕೆಲ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಬ್ಯಾಂಕು ಕಛೇರಿಗಳ ಸಂಖ್ಯೆಯನ್ನು ವೃದ್ಧಿಪಡಿಸುವುದು ಅವಶ್ಯವಾಗಿದೆ. ಈ ತೆರನಾದ ಬೆಳವಣಿಗೆ ಪ್ರಾದೇಶಿಕ ಅಭಿವೃದ್ಧಿಗೆ ಹೆಚ್ಚಿನ ಸಹಾಯ ಹಾಗೂ ಸಹಕಾರವನ್ನು ನೀಡಬಲ್ಲದು. ಈ ಕಾರಣಕ್ಕಾಗಿ ಬ್ಯಾಂಕಿನ ವಹಿವಾಟು ಹಾಗೂ ಅಸ್ತಿತ್ವಕ್ಕೆ ಕನಿಷ್ಠ 6,000 ಜನಸಂಖ್ಯೆ ಹಾಗೂ 30 ಚ.ಕಿಮೀ. ಪ್ರದೇಶವನ್ನು ಅವಶ್ಯವಾದ ಅಂಶವೆಂದು ಪರಿಗಣಿಸಿ, ಪ್ರಾದೇಶಿಕ, ಸಾಮಾಜಿಕ, ಆರ್ಥಿಕ ಹಾಗೂ ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಇನ್ನೂ ಸ್ಥಾಪಿಸಬೇಕಾದ ಬ್ಯಾಂಕು ಕಛೇರಿಗಳ ಸಂಖ್ಯೆಯನ್ನು ನಿರ್ಧರಿಸಲಾಗಿದೆ.

ಸದ್ಯಕ್ಕೆ ರಾಜ್ಯದಲ್ಲಿ ಸರಾಸರಿ 46 ಚ.ಕಿಮೀ. ಪ್ರದೇಶಕ್ಕೆ ಹಾಗೂ 9,000 ಜನರಿಗೆ ಒಂದರಂತೆ ಬ್ಯಾಂಕುಗಳು ಇವೆ. ಆದರೆ ಜನಸಂಖ್ಯೆ ಹಾಗೂ ಹಣಕಾಸಿನ ವಹಿವಾಟಿನ ದೃಷ್ಟಿಯಲ್ಲಿ ಈ ಅಂತರ ಅನುಕೂಲಕರವಲ್ಲ. ಈ ಕಾರಣಕ್ಕಾಗಿ ಸದ್ಯದ ಅಂತರ ಹಾಗೂ ಜನಸಂಖ್ಯೆಯ ಒತ್ತಡವನ್ನು ಕಡಿಮೆಗೊಳಿಸುವುದು ಬ್ಯಾಂಕುಗಳ ಉದ್ದೇಶ ಸಾಧನೆಗೆ ಹೆಚ್ಚು ಪ್ರೋತ್ಸಾಹ ನೀಡಬಲ್ಲದು. ರಾಜ್ಯದ ಹಾಗೂ ದೇಶದ ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಕನಿಷ್ಠ ಮಟ್ಟದ ಸೌಕರ್ಯವನ್ನು ಒದಗಿಸುವುದು ಪ್ರಾದೇಶಿಕ ಅಭಿವೃದ್ಧಿಗೆ ಅವಶ್ಯವಿದೆ. ಇದಕ್ಕಾಗಿ ಮೇಲೆ ಸೂಚಿಸಿದ ಅಂಶಗಳನ್ನು ಆಧರಿಸಿ ಕೆಳಗಿನಂತೆ ಜಿಲ್ಲಾವಾರು ಬ್ಯಾಂಕು ಕಛೇರಿಗಳ ಸ್ಥಾಪನೆಯನ್ನು ಸೂಚಿಸಲಾಗಿದೆ. ಪ್ರತಿ ಜಿಲ್ಲೆಯಲ್ಲಿ ಸ್ಥಾಪಿಸಬೇಕಾದ ಬ್ಯಾಂಕು ಕಛೇರಿಗಳ ಸಂಖ್ಯೆಯನ್ನು ಕೋಷ್ಟಕ 6ರಲ್ಲಿ ತೋರಿಸಲಾಗಿದೆ.

ಕೋಷ್ಟಕ 6

| ಜಿಲ್ಲೆಗಳು | ಬ್ಯಾಂಕು ಕಛೇರಿಗಳ ಬೇಡಿಕೆ |
|---|---|
| ಬೆಂಗಳೂರು | 675 |
| ಬೆಳಗಾಂವಿ | 470 |
| ಬಳ್ಳಾರಿ | 290 |
| ಬೀದರ್ | 100 |
| ಬಿಜಾಪುರ | 300 |
| ಚಿಕ್ಕಮಗಳೂರು | 150 |
| ಚಿತ್ರದುರ್ಗ | 180 |
| ದ. ಕನ್ನಡ | 340 |
| ಧಾರವಾಡ | 400 |
| ಗುಲಬರ್ಗ | 200 |
| ಹಾಸನ | 175 |
| ಕೊಡಗು | 100 |
| ಕೋಲಾರ | 150 |
| ಮಂಡ್ಯ | 150 |
| ಮೈಸೂರು | 300 |
| ರಾಯಚೂರು | 200 |
| ಶಿವಮೊಗ್ಗ | 200 |
| ತುಮಕೂರು | 150 |
| ಉ. ಕನ್ನಡ | 200 |
| ರಾಜ್ಯದ ಒಟ್ಟು | 4730 |

ಪ್ರಾದೇಶಿಕ ಹಾಗೂ ಜನಸಂಖ್ಯೆಯ ಬೇಡಿಕೆ, ಪ್ರಾದೇಶಿಕ ನಿಸರ್ಗ ಸಂಪನ್ಮೂಲಗಳು, ಆರ್ಥಿಕ ಚಟುವಟಿಕೆ, ಪ್ರಗತಿಯ ಅವಕಾಶ ಹಾಗೂ ಸಾಮಾಜಿಕ ಬೆಳವಣಿಗೆ ಮತ್ತು ಇನ್ನುಳಿದ ಇಂಥ ಅಂಶದೊಂದಿಗೆ ಹೊಂದಾಣಿಕೆ ಮಾಡಿದಾಗ ಬೆಂಗಳೂರು ಜಿಲ್ಲೆಯಲ್ಲಿ ಸದ್ಯ ಇರುವುದಕ್ಕಿಂತ ಹೆಚ್ಚು ಸಂಖ್ಯೆಯ ಬ್ಯಾಂಕು ಕಛೇರಿಗಳ ಸ್ಥಾಪನೆ ಅವಶ್ಯವೆಂಬ ಅಂಶ ವ್ಯಕ್ತವಾಗುತ್ತದೆ. ಇದೇ ಪ್ರಕಾರ ಇನ್ನುಳಿದ ಜಿಲ್ಲೆಗಳಲ್ಲಿ ಮೇಲಿನ ಕೋಷ್ಟಕದಲ್ಲಿ ತೋರಿಸಿದ ಸಂಖ್ಯೆಯಂತೆ ಬ್ಯಾಂಕುಗಳ ಸ್ಥಾಪನೆ ಪ್ರಾದೇಶಿಕ ಅಭಿವೃದ್ಧಿಯ ದೃಷ್ಟಿಯಲ್ಲಿ ಅತ್ಯಂತ ಅವಶ್ಯವೆಂದು ಖಚಿತವಾಗಿ ಹೇಳಬಹುದು. ಸದ್ಯದ ಪರಿಸ್ಥಿತಿಯಲ್ಲಿ ರಾಜ್ಯದಲ್ಲಿ ಒಟ್ಟು 4,730ರಿಂದ 5,000 ಬ್ಯಾಂಕು ಕಛೇರಿಗಳ ಆವಶ್ಯಕತೆಯಿದೆ. ಅಂತೆಯೇ, ಸ್ಥಾಪಿಸಲಾಗುವ ಬ್ಯಾಂಕು ಕಛೇರಿಗಳನ್ನು ಹೆಚ್ಚಿಸಿ ಗ್ರಾಮೀಣ ಪ್ರದೇಶದಲ್ಲೆ ಕೇಂದ್ರೀಕರಿಸುವುದು ಅವಶ್ಯವಾಗಿದೆ. ಕೃಷಿಯೇ ಇನ್ನುಳಿದ ಆರ್ಥಿಕ ಪ್ರಗತಿಯ ಹಿನ್ನೆಲೆಯಾಗಿರುವಾಗ ಇದರ ಅಭಿವೃದ್ಧಿಗೆ ಹೆಚ್ಚಿನ ಹಣಕಾಸಿನ ಸೌಲಭ್ಯವನ್ನು ಈ ಮೂಲಕ ಒದಗಿಸುವುದು ಹೆಚ್ಚು ಯುಕ್ತ. ಈ ದಿಶೆಯಲ್ಲಿ ಹೆಚ್ಚು ಹೆಚ್ಚು ಪ್ರಾದೇಶಿಕ ಗ್ರಾಮೀಣ ಬ್ಯಾಂಕು ಕಛೇರಿಗಳ ಸ್ಥಾಪನೆ ಯುಕ್ತವಾದ ಮಾರ್ಗವಾಗಿದೆ.

ಒಟ್ಟಾರೆ ಹೇಳುವುದಾದರೆ ಬ್ಯಾಂಕುಗಳು ಪ್ರಾದೇಶಿಕ ಅಭಿವೃದ್ಧಿಯಲ್ಲಿ ಹೇರಳ ಸಹಾಯ ಹಾಗೂ ಸಹಕಾರವನ್ನು ಒದಗಿಸಬಲ್ಲವು. ಇವುಗಳ ಪ್ರಾದೇಶಿಕ ಹಂಚಿಕೆಯೂ ಇಷ್ಟೇ ಮಹತ್ವದ್ದಾಗಿದೆ. ಜನಸಂಖ್ಯೆ ಹಾಗೂ ಬೆಳವಣಿಗೆಯ ಪ್ರಗತಿಯ ದೃಷ್ಟಿಯಲ್ಲಿ ಹಣ ಒದಗಿಸುವ ಹಾಗೂ ಸಂಗ್ರಹಿಸುವ ಇಂಥ ಸಂಸ್ಥೆಗಳು ಆಯಾ ಪ್ರದೇಶದ ಹಣಕಾಸಿನ ಏರುಪೇರನ್ನು ತಡೆದು ಹಣದುಬ್ಬರವನ್ನು ತಕ್ಕಮಟ್ಟಿಗೆ ನಿಯಂತ್ರಿಸಿ ಪ್ರಾದೇಶಿಕ ಅಭಿವೃದ್ಧಿಯನ್ನು ತ್ವರಿತಗೊಳಿಸಲು ಸಾಕಷ್ಟು ಸಹಕಾರಿಯಾಗಬಲ್ಲವೆಂದು ದೃಢವಾಗಿ ಹೇಳಬಹುದು.* ★

---

* ಅಂಕಿ ಅಂಶಗಳು : ಕರ್ನಾಟಕದ ಅಂಕಿ-ಅಂಶಗಳ ಸ್ಥೂಲ ನೋಟ —೧೯೮೧–೮೨; ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

● ● ●

# ಬ್ಯಾಂಕಿಂಗಿನಲ್ಲಿ ಮಾರಾಟಗಾರಿಕೆ

ಮೂಲ : ರಿಚರ್ಡ್ ಎಸ್. ಹಾಂಡ್ಸ್‌ಕೊಂಬ್
ಅನುವಾದ : ನಾಲ್ವರು

1980-81ರಲ್ಲಿ ಶ್ರೀ ಹ್ಯಾಂಡ್ಸ್‌ಕೊಂಬ್ ಅವರು ಸ್ಥಳೀಯ ಕೇಂದ್ರಗಳಲ್ಲಿ ಚರ್ಚಾ ಸಂಜೆಗಳ ಸರಣಿಯೊಂದನ್ನು ಸಂಘಟಿಸಿದರು. ಅದರಲ್ಲಿ ಭಾಗವಹಿಸಿದವರು 'ಬ್ಯಾಂಕಿನಲ್ಲಿ ಮಾರಾಟಗಾರಿಕೆ ಸಫಲವೋ ವಿಫಲವೋ' ಎಂಬುದನ್ನು ಕುರಿತು ಸಮಾಲೋಚಿಸಿದರು.

ಅವರು ತಂತಮ್ಮ ಬ್ಯಾಂಕುಗಳಲ್ಲಿಯ ತಮ್ಮ ವಿಭಿನ್ನ ಅನುಭವಗಳನ್ನೂ, ಆಚರಣೆಯನ್ನು ಹೇಗೆ ಸುಧಾರಿಸಬಹುದು ಎಂಬುದರಬಗ್ಗೆ ತಮ್ಮ ವಿಚಾರಗಳನ್ನೂ, ಮಾರಾಟಗಾರಿಕೆ ಕಾರ್ಯಕ್ರಮಕ್ಕೆ ವ್ಯಕ್ತಿಗಳಾಗಿ ತಾವು ಹೇಗೆ ಕೊಡುಗೆ ಸಲ್ಲಿಸಬಹುದು ಎಂಬುದನ್ನೂ ಚರ್ಚೆಗೆ ಒಳಪಡಿಸಿದರು. ಈ ಲೇಖನ ಆ ಸಂಧ್ಯಾ ಚರ್ಚೆಗಳನ್ನು ಆಧರಿಸಿದೆ.

ಬ್ಯಾಂಕಿಂಗಿನಲ್ಲಿ, ಮಾರಾಟಗಾರಿಕೆ ಎಂಬುದು ಈ ಮುಂದಿನದಕ್ಕೆ ಸಂಬಂಧಿಸಿದ ಚಟುವಟಿಕೆ :

(ಎ) ಬ್ಯಾಂಕ್ ತಂತ್ರವ್ಯೂಹದಿಂದ ಖಚಿತಗೊಂಡ ಆದ್ಯತಾ ಮಾರುಕಟ್ಟೆ ವಲಯಗಳಲ್ಲಿ ಪ್ರಚಲಿತ ಹಾಗೂ ಭವಿಷ್ಯದ ರಾಷ್ಟ್ರೀಯ, ಅಂತರರಾಷ್ಟ್ರೀಯ, ಸ್ಥಳೀಯ ಮತ್ತು ನಿರ್ದಿಷ್ಟ ಗ್ರಾಹಕ ಅಗತ್ಯಗಳನ್ನು ಗುರುತಿಸುವುದು.

(ಬಿ) ವಾಸ್ತವಿಕವಾದ ಬೆಲೆಯಲ್ಲಿ ಗ್ರಾಹಕರಿಗೆ ಸಮ್ಮತವಾಗುವ ರೀತಿಯಲ್ಲಿ ಆ ಅಗತ್ಯಗಳನ್ನು ಪೂರೈಸುವ ಮತ್ತು ಮಾರುಕಟ್ಟೆ ವಿಭಾಗ ರೂಪಿಸಿ ಬೆಂಬಲಿಸಿದ ಮಿತವ್ಯಯ ಗುಣವುಳ್ಳ ಸಂಗತವೂ, ವಿಶ್ವಾಸಾರ್ಹವಾದ ಮಾರಾಟ ಮತ್ತು ಸೇವಾ ವಿಧಾನಗಳನ್ನು ಒದಗಿಸಿದಾಗ ಬ್ಯಾಂಕಿಗೆ ಲಾಭವನ್ನು ದೊರಕಿಸಿ ಕೊಡುವಂಥ ಪದಾರ್ಥಗಳು ಮತ್ತು ಸೇವೆಗಳ ಅಭಿವೃದ್ಧಿ ಮತ್ತು ಪ್ರವರ್ತನೆ.

ಬ್ಯಾಂಕಿಂಗಿನಲ್ಲಿ ಮಾರಾಟಗಾರಿಕೆ ಹೊಸದೇನೂ ಅಲ್ಲದಿರಬಹುದು. 1856ರಷ್ಟು ಹಿಂದೆಯೇ ಜಾರ್ಜ್ ರೇ ಅವರು ಹೊಸ ಬ್ಯಾಂಕುಗಳು ಮತ್ತು ಶಾಖೆಗಳನ್ನು ತೆರೆಯುವ ಸವಾಲನ್ನು ಮತ್ತು ನಾವು ಈಗ ಪರಿಣಾಮಕಾರಿ ಮಾರಾಟಗಾರಿಕೆ ಎಂದು ಕರೆಯುವುದರ ಇತರ ಮೂಲ ಘಟಕಗಳನ್ನು 'ದಿ ಕಂಟ್ರಿ ಬ್ಯಾಂಕರ್'ನಲ್ಲಿ ವಿವರಿಸಿದ್ದಾರೆ. ಹಲವು ಮಂದಿ ಉತ್ತಮ ಬ್ಯಾಂಕರರು ಅದನ್ನು ಕಲೆಯೆಂದು ಹೇಳಿಕೊಳ್ಳದೆಯೇ ಅಂದಿನಿಂದಲೂ ಅನುಸರಿಸುತ್ತ ಬಂದಿದ್ದಾರೆ. ಆದರೆ ಅವರು ಹೆಚ್ಚು ಸಂಖ್ಯೆಯಲ್ಲಿರಲಿಲ್ಲ ಮತ್ತು 1960ರ ದಶಕದಷ್ಟು ಈಚಿನವರೆಗೂ ಮಾರಾಟಗಾರಿಕೆ ಮತ್ತು ಆಯೋಜನೆಗಳು ಬ್ಯಾಂಕಿಂಗ್‌ನಿಂದ ಹೊರಗಿನ ಔಪಚಾರಿಕ ಜ್ಞಾನಕ್ಷೇತ್ರಗಳೆಂದು ವ್ಯಾಪಕವಾಗಿ ಗುರುತಿಸಲ್ಪಟ್ಟಿದ್ದಾಗ ಅವು ಪ್ರಸಾಮಾನ್ಯ ಬ್ಯಾಂಕಿಂಗ್ ಚಟುವಟಿಕೆಯೆಂದು ಪರಿಗಣಿತವಾಗಿರಲಿಲ್ಲ. ಗ್ರಾಹಕ ಅಗತ್ಯಗಳು ಈಗ ಹೆಚ್ಚು ಹೆಚ್ಚು ತುರ್ತಿನವಾಗುತ್ತಿವೆ. ಮತ್ತು ವ್ಯಕ್ತಿಗತ ಹಾಗೂ ಸಾಂಸ್ಥಿಕ ವ್ಯವಹಾರಗಳೆರಡಕ್ಕಾಗಿಯೂ ಅಂತರರಾಷ್ಟ್ರೀಯ ಸ್ಪರ್ಧೆ ನಡೆಯುತ್ತಿದೆ. ಇವುಗಳ ಇದಿರಲ್ಲಿ ಪರಿಸ್ಥಿತಿ ಇಂದು ಬದಲಾಗುತ್ತಿದೆ. ಬ್ಯಾಂಕುಗಳು ಈಗ ಮಾರಾಟಗಾರಿಕೆ ಮತ್ತು ವಿಕ್ರಯ ಯೋಜನಾ ಪದ್ಧತಿಗಳು ಬ್ಯಾಂಕುಗಳ ಪ್ರಧಾನ ಕಛೇರಿಯ ಪ್ರದೇಶದ ಹಾಗೂ ಶಾಖೆಯ ಮಟ್ಟಗಳಲ್ಲಿ ಜಾರಿಗೆ ತಂದಿವೆ. ಜಾಹೀರಾತು ಮತ್ತು ಸಾರ್ವಜನಿಕ ಸಂಬಂಧಗಳ ಬೆಂಬಲದಿಂದ ಪ್ರಮುಖ ಪ್ರವರ್ತನ ಕಾರ್ಯಕ್ರಮಗಳನ್ನು ಅವು ರೂಪಿಸಿಕೊಂಡಿವೆ. ಹಣ ಕಾಸು ಸೇವೆಗಳ ವಿಕ್ರಯ ನೈಪುಣ್ಯಗಳ ಮೇಲೆ ಲಕ್ಷ್ಯವಿಟ್ಟ ಹಾಗೂ ಯೋಜಿತ ಅಭಿವೃದ್ಧಿ, ವ್ಯವಸ್ಥಾಪನೆ, ಸಂಭಾವನೆಗಳ ಬೆಂಬಲವುಳ್ಳ ಸಿಬ್ಬಂದಿ ತರಬೇತಿ ಕಾರ್ಯಕ್ರಮಗಳನ್ನು ಅವು ಸ್ಥಾಪಿಸಿವೆ.

ಎಲ್ಲವೂ ಚೆನ್ನಾಗಿದೆ ಎಂದೇನೂ ಇದರ ಅರ್ಥವಾಗಬೇಕಾಗಿಲ್ಲ. 1970ರ ದಶಕದ ಆರಂಭದ ತ್ರಾಸದಾಯಕ ಹಾಗೂ ವ್ಯಾಪಕ ವರ್ಷಗಳಲ್ಲಿ ಆಚರಣೆಗೆ ತಂದ ಅಭ್ಯಾಸಗಳು, ಸುಲಭ ಲಾಭಗಳು—ಇವು ಈಚಿನ ಅವಧಿಗಳಲ್ಲಿ ಸ್ವಲ್ಪಮಟ್ಟಿಗೆ ಸಡಿಲವಾಗಿವೆ. ಲಾಭ ಸಂಪಾದನೆ ಸುಲಭವಾಗಿರಲಿ, ಕಷ್ಟಕರವಾಗೇ ಇರಲಿ ಅಂತೂ ಅದು ಹೇಗಿರಬೇಕು ಎಂಬುದನ್ನು ನೆನಪಿಗೆ ತಂದುಕೊಳ್ಳುವುದು ಈಗ ಉಪಯುಕ್ತವೆನಿಸುತ್ತದೆ. ಕಾಲ ಇನ್ನೂ ಬದಲಾಗುತ್ತಿದೆ ಯೆಂಬುದನ್ನು ನಾವು ಯಾವಾಗಲೂ ಮನಸ್ಸಿನಲ್ಲಿಟ್ಟುಕೊಳ್ಳಬೇಕು ; 10 ವರ್ಷಗಳ ಹಿಂದೆ ಯಶಸ್ವಿಯಾದ ಆಚರಣೆಗಳು ಮುಂಬರುವ ವರ್ಷಗಳಲ್ಲಿ ಅಷ್ಟೇ ಚೆನ್ನಾಗಿ ಕೆಲಸ ಮಾಡುತ್ತವೆಂದೇನೂ ಅಲ್ಲ.

### ಯಶಸ್ವಿ ಮಾರಾಟಗಾರಿಕೆ

ಬ್ಯಾಂಕೊಂದರ ಮಾರಾಟಗಾರಿಕೆ ಯಶಸ್ವಿಯೆನಿಸಬೇಕಾದರೆ ಅದಕ್ಕೆ ಅನ್ವಯವಾಗುವುದೆಂದು ಒಪ್ಪಲಾದ ವ್ಯಾಖ್ಯೆಗೆ ಎಲ್ಲಾ ಮಟ್ಟಗಳಲ್ಲೂ ಬದ್ಧವಾಗಿರುವುದು ಆವಶ್ಯ. ಮಾರಾಟಗಾರಿಕೆಯನ್ನು ವ್ಯವಸ್ಥಾಪನದ ಏಕಮಾತ್ರ ಕಾರ್ಯಭಾರಕ್ಕೆ ಅಥವಾ ನಿರ್ವಹಣೆಯ ಏಕಮಾತ್ರ ಮಟ್ಟಕ್ಕೆ ಸೀಮಿತಗೊಳಿಸಲಾಗದು. ಇದೆಲ್ಲಾ ಯಾವುದರ ಬಗ್ಗೆ ಹಾಗೂ ಇದರಲ್ಲಿ ತಾನು ವಹಿಸಬಹುದಾದ ಪಾತ್ರ ಏನು—ಎಂಬುದನ್ನು ಕಿರಿಯ ವ್ಯವಸ್ಥಾಪನದಿಂದ ಹಿಡಿದು ಪ್ರಧಾನ ವ್ಯವಸ್ಥಾಪನದ ವರೆಗೆ ಸಿಬ್ಬಂದಿಯ ಪ್ರತಿಯೊಬ್ಬ ಸದಸ್ಯನೂ ತಿಳಿದುಕೊಳ್ಳುವುದು ಅಗತ್ಯ.

ವಿಕ್ರಯವು ಮಾರಾಟಗಾರಿಕೆಯ ಒಂದು ಮೂಲಭೂತ ಅಂಗ ಎಂಬುದನ್ನು ಒಟ್ಟು ವ್ಯಕ್ತಿ ಮುಖ್ಯವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕಾದ್ದು ಬಹುಶಃ ಅಗತ್ಯ. ನಿಸ್ಸತ್ವವಾದ ಮುಖಾಮುಖಿ ವಿಕ್ರಯ

---

Richard S. Handscombe : Marketing in Banking, *Journal of the Indian Institute of Bankers*. ರಿಚರ್ಡ್ ಎಸ್. ಹ್ಯಾಂಡ್ಸ್‌ಕೊಂಬ್ ಅವರು 'ಬ್ಯಾಂಕರ್ಸ್ ಮ್ಯಾನೇಜ್‌ಮೆಂಟ್ ಹ್ಯಾಂಡ್‌ಬುಕ್'ನ ಸಂಪಾದಕರು ; ಅಂತರರಾಷ್ಟ್ರೀಯ ಸಲಹೆಗಾರರು; ಯೂರೋಪಿಯನ್ ಬಿಸನೆಸ್ ಸ್ಕೂಲಿನ ಇಂಡಸ್ಟ್ರಿಯಲ್ ಫೆಲೊ.

ಸತ್ವಹೀನವಾದ್ದಾದಾಗ, ಅತ್ಯುತ್ತಮ ಮಾರಾಟಗಾರಿಕೆ ಯೋಜನೆಗಳು ದುರ್ಬಲಗೊಳ್ಳಬಹುದು ಅಥವಾ ಇನ್ನೂ ಕೆಡಬಹುದು.

ಈ ಬಗ್ಗೆ ವಿಶೇಷ ಗಮನ ನೀಡಬೇಕಾದ ನಾಲ್ಕು ಕ್ಷೇತ್ರಗಳನ್ನು ನಾವು ನೋಡಬಹುದು.

### ತಂತ್ರವ್ಯೂಹ

ಬ್ಯಾಂಕು ತನ್ನ ಸ್ಪರ್ಧಿಗಳ ಬಲಾಬಲಗಳನ್ನು ಮಾತ್ರವಲ್ಲದೆ, ತನ್ನದೇ ಆದ ಬಲಾಬಲಗಳನ್ನು ಕೂಡ ಯುಕ್ತವಾಗಿ ಪರಿಗಣಿಸಿ ತನ್ನದೇ ಆದ ಅನನ್ಯ ವ್ಯಕ್ತಿತ್ವವನ್ನು ಖಚಿತಗೊಳಿಸಲು ಯತ್ನಿಸಬೇಕು.

ಮುಂಗಟ್ಟೆಯ ಗಾಜಿನ ತೆರೆಗಳಿಂದ ಅವರಿಗೆ ಅಷ್ಟೇನೂ ಹತಾಶೆ ಆಗದಿರಬಹುದು. ಸ್ನೇಹಮಯ ಬ್ಯಾಂಕು, ಕುಟುಂಬ ಬ್ಯಾಂಕು ಇಂಥ ಮಾತುಗಳಷ್ಟೇ ಸಾಲವು. ಈಗಿನ ಅಮೆರಿಕನ್ ಮತ್ತು ಇತರ ಅಂತರರಾಷ್ಟ್ರೀಯ ಬ್ಯಾಂಕುಗಳೇ ಅಲ್ಲದೆ ಬ್ರಿಟನ್ನಿನ ಬ್ಯಾಂಕುಗಳು ಟಿ.ಎಸ್.ಬಿ. ಮತ್ತು ನ್ಯಾಷನಲ್ ಗಿರೋ ಬ್ಯಾಂಕಿನ ವಣಿಕ ಬ್ಯಾಂಕುಗಳ, ಮತ್ತು ಸಹಭಾಗಿ ಸಂಸ್ಥೆಗಳ ಹಾಗೂ ಹಣದ ಅಂಗಡಿಗಳೇ ಮುಂತಾದ ಹಲವಾರು ಸಂಸ್ಥೆಗಳಿಂದ ಕೂಡಿದ ವೈವಿಧ್ಯಮಯ ಮಾರಾಟದ ವಿಶಾಲ ಕ್ಷೇತ್ರದ ಸ್ಪರ್ಧೆಯನ್ನೂ ಬ್ಯಾಂಕು ಗುರುತಿಸಬೇಕು. ಪ್ರಾದೇಶಿಕ ಮತ್ತು ಶಾಖಾ ಮಟ್ಟದಲ್ಲಿ ವಿವರವಾದ ಆಯೋಜನೆಗೆ ಚೌಕಟ್ಟು ಒದಗಿಸಲು ತಂತ್ರವ್ಯೂಹದ ಸಾಧ್ಯವಾದಷ್ಟು ವ್ಯಾಪಕವಾದ ತಿಳುವಳಿಕೆಯನ್ನು ಸಂಘಟನೆಯ ಎಲ್ಲ ಮಟ್ಟಗಳಿಗೂ ಸಂವಹನ ಮಾಡಬೇಕು.

ವ್ಯಾಪಕವಾದ ಶಾಖಾ ಜಾಲಗಳುಳ್ಳ ಹಾಗೂ ಬಾಡಿಗೆ ಕೊಳ್ಳಿಕೆ, ಗುತ್ತಿಗೆ, ಋಣಕೊಳ್ಳಿಕೆ, ವಣಿಕ ಬ್ಯಾಂಕಿಂಗ್, ಇಂಥ ವ್ಯವಹಾರ ಮಾಡುವ ಸಹಾಯಕ ಸೇವಾ ಸಂಸ್ಥೆಗಳುಳ್ಳ ಬ್ಯಾಂಕುಗಳಿಗೆ ಇದು ನಿರ್ದಿಷ್ಟವಾಗಿ ಮುಖ್ಯವಾದದ್ದು ಎಂಬುದು ನಿಸ್ಸಂದೇಹ ಮತ್ತು ಅಷ್ಟೇ ಕಷ್ಟಕರ.

ಪ್ರಾದೇಶಿಕ ಮತ್ತು ಶಾಖಾ ಸಿಬ್ಬಂದಿಗಳಿಗೆ ಈ ತಂತ್ರವ್ಯೂಹದ ದಿಸೆಯಲ್ಲಿ ಯೋಚಿಸಲು ಪ್ರೋತ್ಸಾಹ ನೀಡಬೇಕು. ಹೀಗೆ ಮಾಡಿದಾಗ ಸ್ಥಳೀಯ ಮಾರುಕಟ್ಟೆ, ಸ್ಥಳೀಯ ಸ್ಪರ್ಧೆ, ಸ್ಥಳೀಯ ಅವಕಾಶಗಳು ಹಾಗೂ ಬೆದರಿಕೆಗಳನ್ನು ಕುರಿತ ಅವರದೇ ಆದ ಅರಿವನ್ನು ಇದರಲ್ಲಿ ಸಮಾವೇಶಗೊಳಿಸಬಹುದು.

ಈ ಬಗೆಯ ಸಂಯೋಜನೆಯಿಲ್ಲದಿದ್ದಾಗ ಮಾರುಕಟ್ಟೆಯ ಭವಸಾಮರ್ಥ್ಯ, ಗ್ರಾಹಕನ ಅಗತ್ಯಗಳು, ಅಥವಾ ಗ್ರಾಹಕರ ಸಂಬಂಧಗಳು ಇವುಗಳಿಗೆ ಅಷ್ಟೇನೂ ಸಂಬಂಧವಿಲ್ಲದ ನೌಕರಶಾಹಿಯ ಕಾಗದದ ಕಸರತ್ತಾಗಿ ಮಾರಾಟಗಾರಿಕೆ ಬಹುಬೇಗ ಅವನತಿ ಹೊಂದಬಹುದು.

ತಂತ್ರವ್ಯೂಹವನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಹಣಕಾಸಿನ ಬಲ ಮುಖ್ಯವಾಗಿದ್ದಾಗ್ಯೂ ಅದನ್ನೇ ನವೋನ್ಮೇಷಣ ಅವಲಂಬಿಸಿಲ್ಲ ಎಂಬುದನ್ನು ಗುರುತಿಸುವುದು ಮುಖ್ಯ. ನವೋನ್ಮೇಷಣೆಯು ವೈಚಾರಿಕ ಜನರಿಂದ ಬರುತ್ತದೆ. ಮಾರಾಟಗಾರಿಕೆ ಎಲ್ಲಿ ನವೋನ್ಮೇಷಣೆಗೆ ಅಣಿಯಾಗಿದೆಯೋ ಮತ್ತು ಎಲ್ಲಿ ಅದು ನಿಯಂತ್ರಣ ಕಾರ್ಯಭಾರಕ್ಕಿಂತ ಹೆಚ್ಚಾಗಿದೆಯೋ ಅಂಥ ಪರಿಸರಗಳಲ್ಲಿ ವಿಚಾರಗಳು ವಿಕಾಸಗೊಳ್ಳುತ್ತವೆ.

### ಸೇವೆಗಳ ಬೆಲೆ ಹಾಗೂ ಉತ್ಪಾದಕತೆ

ಬ್ಯಾಂಕಿಂಗ್ ಸೇವೆಗಳು ಲಾಭಪ್ರದವಾಗಿರಬೇಕು ಮತ್ತು ಅವು ಗ್ರಾಹಕರ ಅಗತ್ಯಗಳನ್ನು ಮಿತವ್ಯಯಕಾರಿಯಾಗಿ ಹಾಗೂ ಶೀಘ್ರವಾಗಿ ಪೂರೈಸಬೇಕು. ಈಗ ಅಸ್ತಿತ್ವದಲ್ಲಿರುವ ಹಾಗೂ ನವೋನ್ಮೇಷಕರವಾದ ಪ್ರತಿಯೊಂದು ಸೇವೆಯನ್ನೂ ಶಾಖೆಯ ದತ್ತಾಂಶ ಸಂಸ್ಕರಣದ ಹಾಗೂ ಮಾರಾಟಗಾರಿಕೆಯ ಸಿಬ್ಬಂದಿ ಒಟ್ಟಿಗೆ ವಿಶ್ಲೇಷಿಸುವುದು ಅಗತ್ಯ. ಉದಾಹರಣೆಗೆ ವೈಯಕ್ತಿಕ ಸಾಲ ಕುರಿತು ಶಿಷ್ಟೀಕೃತ ಅರ್ಜಿಯಲ್ಲಿ ಅವರು ಇಂಥ ಪ್ರಶ್ನೆಗಳನ್ನು ಕೇಳಬಹುದು :

ಬಹಳಷ್ಟು ಕೆಲಸವನ್ನು ಯಾರು ಮಾಡತಕ್ಕದ್ದು—ಗ್ರಾಹಕನೋ ಅಥವಾ (ದುಬಾರಿ) ಸಿಬ್ಬಂದಿಯೋ ?

ವಿವರ ಹಾಗೂ ವಿನ್ಯಾಸವನ್ನು ಕುರಿತಂತೆ ಅರ್ಜಿ ನಮೂನೆಯನ್ನು ಸರಳಗೊಳಿಸಬಹುದೆ ?

ಬರವಣಿಗೆಯ ಕೆಲಸ ಕಡಿಮೆ ಮಾಡುವುದು ಸಾಧ್ಯವೆ ?

ಗ್ರಾಹಕನ ಹಾಗೂ ಬ್ಯಾಂಕಿನ ದೃಷ್ಟಿಯಿಂದ ಸೇವೆಯನ್ನು ಇನ್ನೂ ಪರಿಣಾಮಕಾರಿಯಾಗಿ ಒದಗಿಸುವುದು ಸಾಧ್ಯವೆ ?

### ಗ್ರಾಹಕರು : ಸಾಮಂಜಸ್ಯದ ಅಗತ್ಯ

ಬ್ಯಾಂಕುಗಳ ನಗರಗಳ ದೊಡ್ಡ ಶಾಖೆಗಳಲ್ಲಿ ಸಿಬ್ಬಂದಿ ಮತ್ತು ಗ್ರಾಹಕರು (ಮತ್ತು ಭಾವಿ ಗ್ರಾಹಕರು) ಕಲೆಯುವ ಪರಿಸ್ಥಿತಿಯು ಸುಧಾರಣೆ ಬಹಳಷ್ಟು ಸಾಧಿಸಿದೆ. ದುರದೃಷ್ಟದ ಸಂಗತಿಯೆಂದರೆ, ಸಾಂಪ್ರದಾಯಿಕ ಮುಂಗಟ್ಟೆ ಶಾಖೆಗಳಾಗಿ ವಿನ್ಯಾಸಗೊಂಡ ಮತ್ತು ಸಲಹಾ ಮೇಜುಗಳಿಗೆ ಅಥವಾ ಪ್ರವರ್ತಕ ಪ್ರದರ್ಶನಗಳಿಗಾದರೂ ಅವಕಾಶವಾಗುವಂತೆ ಸುಲಭವಾಗಿ ಪರಿವರ್ತಿತವಾಗದ ಬಹಳ ಹೆಚ್ಚಿನ ಸಂಖ್ಯೆಯ ಸಣ್ಣ ಶಾಖೆಗಳ ವಿಚಾರದಲ್ಲಿ ಇದು ನಿಜವಲ್ಲ. ಇಲ್ಲಿ ಬದಲಾವಣೆಯ ಅಗತ್ಯವನ್ನು ವ್ಯಾಪಕವಾಗಿ ಗುರುತಿಸಲಾಗಿದೆ. ಅಂತೆಯೇ ಇದಕ್ಕೆ ತಗಲುವ ಬಹಳ ಹೆಚ್ಚಿನ ಖರ್ಚನ್ನು ಕೂಡ. ಆದರೆ ಸದ್ಯದ ಆವರಣಗಳ ಇತಿಮಿತಿಗಳಲ್ಲಿಯೂ ಗ್ರಾಹಕ ಸಂಬಂಧಗಳು ಹರ್ಷದಾಯಕವೂ, ಪ್ರತಿಫಲದಾಯಕವೂ ಆಗಿರುವಂತೆ ಖಚಿತ ಪಡಿಸುವಂತೆ ಈಗಲೂ ಹೆಚ್ಚಾಗಿ ಸಾಧ್ಯವಿದೆ. ಯಾವ ಸೇವೆಗಳು ವಾಸ್ತವವಾಗಿ ಲಭ್ಯವಿವೆ ಎಂಬುದನ್ನು ಬ್ಯಾಂಕಿನ ಎಲ್ಲ ಸಿಬ್ಬಂದಿಯೂ ನಿರ್ದಿಷ್ಟವಾಗಿ ತಿಳಿದಿರಬೇಕು. ಕೆಲವು ತಜ್ಞಸೇವೆಗಳು ಕ್ಷೇತ್ರಕೇಂದ್ರಗಳಲ್ಲಿ ಅಥವಾ ವಿಶೇಷ ಗೊತ್ತುಪಾಡಿನ ಮೂಲಕ ಮಾತ್ರ ಲಭ್ಯವಿವೆ ಎಂಬುದನ್ನು ಸಿಬ್ಬಂದಿಯ ಎಲ್ಲ ಸದಸ್ಯರೂ ಗ್ರಾಹಕರಿಗೆ ವಿವರಿಸಲು ಸಮರ್ಥರಿರಬೇಕು. ಸೇವಾತಜ್ಞರು ಯಾರನ್ನು ಮತ್ತು ಏಕೆ ಭೇಟಿಯಾಗಬೇಕಾಗಿದೆ ಎಂಬುದನ್ನು ಅವರಿಗೆ ಮುಂಚಿತವಾಗಿ ತಿಳಿಸಬೇಕು.

ಬಹುಶಃ ಈ ಲೇಖನದಲ್ಲಿ ಪ್ರತಿಪಾದಿಸಬೇಕಾದ ಅತ್ಯಂತ ಮುಖ್ಯವಾದ ಏಕೈಕ ಅಂಶವೆಂದರೆ, 1982ರಲ್ಲಿ ಕೂಡ ಬ್ಯಾಂಕುಗಳು ತಮ್ಮ ಎಲ್ಲ ಹಣಕಾಸು ಅಗತ್ಯಗಳನ್ನು ಒದಗಿಸುವ ಸಂಸ್ಥೆಗಳೆಂದು ಕೇವಲ ಕೆಲವು ಗ್ರಾಹಕರು ಮಾತ್ರ ಪರಿಗಣಿಸುತ್ತಾರೆ. ಇದು ವಾಸ್ತವ ಸಂಗತಿ. ಕೆಲವು ಬ್ಯಾಂಕುಗಳು 300ಕ್ಕಿಂತ ಹೆಚ್ಚು ಬಗೆಯ ಸೇವೆಗಳನ್ನು ನೀಡುತ್ತವೆ. ಉಳಿದವುಗಳ ವಿಚಾರ ಹಾಗಿರಲಿ. ವಿಮೆ, ಅಡಮಾನಗಳು, ತೆರಿಗೆ ಮತ್ತು ವಿನಿಯೋಜನಾಸಲಹೆ ಇವುಗಳಿಗಾಗಿ ಅವುಗಳ ಗ್ರಾಹಕರು ಈಗಲೂ ಬೇರೆಡೆಯೇ ನೋಡುತ್ತಿದ್ದಾರೆ.

### ಶಾಖಾವ್ಯವಸ್ಥಾಪಕ

ನಿಮ್ಮ ಸ್ವಂತ ವ್ಯವಹಾರ ನಡೆಸಲು ಮತ್ತು ಲಾಭಪ್ರದ ಮಾರಾಟಗಾರಿಕೆ ಮತ್ತು ವಿಕ್ರಯ ತಂಡವನ್ನು ರೂಪಿಸುವಲ್ಲಿ ಹೆಚ್ಚು

ಹೆಚ್ಚು ಸಾಮರ್ಥ್ಯ ಪ್ರಕಟವಾದಂತೆ ಹಂತಹಂತವಾಗಿ, ವ್ಯವಹಾರವನ್ನು ದೊಡ್ಡದಾಗಿ ಬೆಳೆಸಿಕೊಳ್ಳಲು ಬ್ಯಾಂಕಿಂಗಿನಲ್ಲಿರುವಷ್ಟು ವಿಪುಲ ಅವಕಾಶ ಉಳಿದ ಉದ್ಯಮಗಳ ಪೈಕಿ ಹೆಚ್ಚಿನವಕ್ಕೆ ಇಲ್ಲ. ವ್ಯಕ್ತಿಪರ ಶಾಖಾ ವ್ಯವಸ್ಥಾಪಕ ನಿಯತವಾಗಿ ಮಾರಾಟಗಾರಿಕೆಯ ಮತ್ತು ವಿಕ್ರಯ ಆಯೋಜನೆಯ ಸಭೆಗಳನ್ನು ನಡೆಸುತ್ತಾನೆ. ತನ್ನ ಇತರ ಸಿಬ್ಬಂದಿಯ ಎಲ್ಲ ಸದಸ್ಯರನ್ನೂ ಅದರಲ್ಲಿ ತೊಡಗಿಸುವ ಎಚ್ಚರಿಕೆ ವಹಿಸುತ್ತಾನೆ. ಎಚ್ಚರಿಕೆಯಿಂದ ಪೂರ್ವಭಾವಿ ವಿವರಣೆ ನೀಡಿ ಅನಂತರ ಬಹುಶಃ ಭಾಗಿಗಳು ಶಾಖಾ ಕಮ್ಮಟವೊಂದರ ನೇತೃತ್ವ ವಹಿಸುವಂತೆ ಮಾಡಿ ಪ್ರಾದೇಶಿಕ ತರಬೇತಿ ಶಿಬಿರಗಳ ಗರಿಷ್ಠ ಪ್ರಯೋಜನ ದೊರಕುವಂತೆ ಅವನು ನೋಡಿಕೊಳ್ಳುತ್ತಾನೆ.

ತನ್ನದೇ ಆದ ಸಿಬ್ಬಂದಿಯ, ಮತ್ತು ಬ್ಯಾಂಕಿನ ತಜ್ಞರ ಪರಿಣತಿಯನ್ನು ಸಾಧಿಸುವುದರ ಮೂಲಕ ಅವನು ಭವಿಷ್ಯದ ಉತ್ತಮ ಗ್ರಾಹಕರನ್ನು ಒಲಿಸಿಕೊಳ್ಳುತ್ತಾನೆ ಎಂಬುದು ನಿಸ್ಸಂದೇಹ. ಇಂದಿನ ಬ್ಯಾಂಕ್ ತಜ್ಞರ ಅರಿವು ಜಾರ್ಜ್ ರೇ ಅವರಿಗೆ ಅಪರಿಚಿತವಾದಾಗ್ಯೂ ಅವರು ಈ ಕೊನೆಯ ಅಂಶವನ್ನು ಗುರುತಿಸಿದ್ದಾರೆ.

---

ಅನುವಾದಕರು :

ಬಿ. ಎಸ್. ಸಂಜೀವ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ರಿಚ್ಮಂಡ್ ಟೌನ್ ಶಾಖೆ, ಬೆಂಗಳೂರು ೫೬೦ ೦೨೫

ಶ್ರೀಕಂಠೇಶ್ವರ, ಮೇಲ್ವಿಚಾರಕ, ಕರ್ನಾಟಕ ಕೈಗಾರಿಕಾ ಸಹಕಾರಿ ಬ್ಯಾಂಕ್, ನಗರ ಶಾಖೆ, ಬೆಂಗಳೂರು ೫೬೦ ೦೦೨

ಸದಾನಂದ ಚ. ಕಡಲಿ, ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಬೆಂಗಳೂರು ೫೬೦ ೦೧೮

ಜಿ. ಎಂ. ಕೃಷ್ಣ, ಟೌನ್ ಸಹಕಾರ ಬ್ಯಾಂಕ್, ಮಡಿಕೇರಿ ೫೭೧ ೨೦೧



● ● ●

## ಬ್ಯಾಂಕಿಂಗ್ ಕ್ರಾಂತಿ

ಒಂದು ಕಾಲದಲ್ಲಿ ತುಂಬಾ ಸಂಪ್ರದಾಯನಿಷ್ಠವಾಗಿದ್ದ ಬ್ರಿಟಿಷ್ ಬ್ಯಾಂಕುಗಳು ಇಪ್ಪತ್ತನೆಯ ಶತಮಾನಕ್ಕೆ ಹೊಂದಿಕೊಳ್ಳಲು ಯತ್ನಿಸಿದಾಗಲೆಲ್ಲ ಈ ಪ್ರಕ್ರಿಯೆಯನ್ನು ಹಣಕಾಸು ಪತ್ರಿಕೋದ್ಯಮಿಗಳು 'ಬ್ಯಾಂಕಿಂಗ್ ಕ್ರಾಂತಿ' ಯೆಂದು ಕರೆಯುತ್ತಾರೆ. ಬಾಡಿಗೆ-ಕೊಳ್ಳಿಕೆ ಮತ್ತು ವೈಯಕ್ತಿಕ ಸಾಲಗಳು, 'ಬ್ಯಾಂಕ್ ವ್ಯವಸ್ಥಾಪಕ ನಿಮ್ಮ ಅಲಮಾರಿನಲ್ಲಿ' ಎಂಬ ವಾಣಿಜ್ಯ ಜಾಹೀರಾತುಗಳು, ಕಾರ್ಟೂನ್ ಚಲನಚಿತ್ರಗಳು, ವರ್ಣರಂಜಿತ ಪುರವಣಿಗಳಲ್ಲಿ ಹೊಳೆಹೊಳೆಯುವ ಜಾಹೀರಾತುಗಳು, ಮುನ್ನರಿಯದ ಗ್ರಾಹಕರಿಗೆ ಉಚಿತ ಉದರಿ ಕಾರ್ಡುಗಳನ್ನು ನೀಡಲು ಠೀಕು ಉಡುಪು ಧಾರಿಣಿ ಲಲನೆಯರ ದಾಳಿ—ಇವು ಜಾರಿಗೆ ಬಂದಾಗಲೆಲ್ಲ ಇವನ್ನು ಬ್ಯಾಂಕಿಂಗ್ ಕ್ರಾಂತಿಯೆಂದು ಅವರು ಕರೆದಿದ್ದಾರೆ.

—ವಿಲಿಯಮ್ ಡೇವಿಸ್

# ಕನ್ನಡ ನಾಡು, ನುಡಿಯ ಇತಿಹಾಸ ಭವ್ಯ
# ಅದರ ಪುನರುತ್ಥಾನಕ್ಕೆ ನಮ್ಮ ಯೋಜನೆಗಳು

ಕರ್ನಾಟಕ ತನ್ನದೇ ಆದ ಭವ್ಯ ಪರಂಪರೆಯನ್ನು ಹೊಂದಿದೆ. ಈ ಪರಂಪರೆಯನ್ನು ಉಳಿಸಿ, ಬೆಳೆಸಿ, ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎರಡು ಪ್ರಮುಖ ಯೋಜನೆಗಳನ್ನು ಹಮ್ಮಿಕೊಂಡಿದೆ.

**1 ಕನ್ನಡದ ಅಭಿವೃದ್ಧಿ**

ಈ ಯೋಜನೆಯಡಿ ತರಬೇತಿ ಶಿಬಿರಗಳು, ಭಾಷಾಂತರ ಮತ್ತು ಪ್ರಕಟಣೆಗಳು ಹಾಗೂ ಇತರ ಪ್ರೋತ್ಸಾಹಕ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಈ ಮೂಲಕ ರಾಜ್ಯದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗದ ಎಲ್ಲ ಅಧಿಕಾರಿಗಳು ಮತ್ತು ನೌಕರರಿಗೆ ಆಡಳಿತ ಕನ್ನಡದಲ್ಲಿ ತರಬೇತಿ, ಎಲ್ಲ ಇಲಾಖೆಗಳ ಪಾರಿಭಾಷಿಕ ಶಬ್ದಕೋಶಗಳ ರಚನೆ, ಪರಿಷ್ಕರಣ ಹಾಗೂ ಅನುವಾದ, ಕನ್ನಡ ಬೆರಳಚ್ಚುಗಾರರು ಮತ್ತು ಶೀಘ್ರಲಿಪಿಗಾರರಿಗೆ ಪ್ರೋತ್ಸಾಹ, ಧನಸಹಾಯ ಮತ್ತು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕೆಲಹಂತದಲ್ಲಿ ವಿದ್ಯಾರ್ಥಿವೇತನ ನೀಡಿಕೆ ಮುಂತಾದ ಕಾರ್ಯಕ್ರಮಗಳು.

**2 ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು**

ರಾಜ್ಯದಲ್ಲಿ ಸಾಹಿತ್ಯ, ನಾಟಕ, ಲಲಿತಕಲೆ, ಸಂಗೀತ, ನೃತ್ಯ, ಜಾನಪದ, ಯಕ್ಷಗಾನ ಮತ್ತು ಉರ್ದು ಅಕಾಡೆಮಿಗಳು ಸ್ಥಾಪಿತಗೊಂಡಿವೆ. ಇವುಗಳ ಮೂಲಕ ಸಾಹಿತಿಗಳು ಕಲಾವಿದರಿಗೆ ಸೂಕ್ತ ಪ್ರೋತ್ಸಾಹ; ರಾಜ್ಯದ ಹೊರಗಡೆಯೂ ತಮ್ಮ ಪ್ರತಿಭೆ ತೋರಲು ಎಲ್ಲ ಅವಕಾಶ ಮತ್ತು ಪ್ರೋತ್ಸಾಹ; ಪುಸ್ತಕಗಳ ಪ್ರಕಟಣೆ; ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣಗಳು; ಲೇಖಕರಿಗೆ ಮತ್ತು ಕಲಾವಿದರಿಗೆ ಪ್ರಶಸ್ತಿ ನೀಡಿಕೆ; ಮಾಸಾಶನ ಮತ್ತು ಗೌರವಧನ ನೀಡಿಕೆ; ಲೇಖಕರು ಮತ್ತು ಕಲಾವಿದರ ವಿಶೇಷ ಜ್ಞಾನಾರ್ಜನೆಗಾಗಿ ಪ್ರವಾಸಾನುದಾನ; ವೈದ್ಯಕೀಯ ನೆರವು; ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳಿಗೆ ಸಹಾಯಧನ, ರಂಗ ತರಬೇತಿ ಕಾರ್ಯಕ್ರಮ; ತರಬೇತಿ ಶಿಬಿರಗಳು, ಗ್ರಂಥ ಭಂಡಾರಗಳಿಗೆ ಸಹಾಯಧನ ನೀಡಿಕೆ, ಮುಂತಾದ ಕಾರ್ಯಕ್ರಮಗಳು. ಇಷ್ಟೇ ಸಾಲದೆಂಬಂತೆ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಸ್ಥಾನವಾಗಿ ಬೆಂಗಳೂರಿನಲ್ಲಿ ರವೀಂದ್ರ ಕಲಾಕ್ಷೇತ್ರ; ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ರಂಗಮಂದಿರಗಳು.

ಈ ಎಲ್ಲ ಕಾರ್ಯಕ್ರಮಗಳಿಂದಾಗಿ ಕನ್ನಡ ಭಾಷೆ ಮತ್ತು ನಾಡಿನ
ಭವ್ಯ ಪರಂಪರೆಯು ಪುನರ್‌ನಿರ್ಮಾಣವಾಗುತ್ತಲಿದೆ.

—ಕರ್ನಾಟಕ ವಾರ್ತೆ

# ಬ್ಯಾಂಕಿನಲ್ಲಿ ಹಾಸ್ಯ

ವಾಗೀಶ

೧

ಒಮ್ಮೆ ಬ್ಯಾಂಕಿನ ಲೆಕ್ಕಪತ್ರಗಳ ಪರಿಶೋಧನೆಗೆಂದು ಆಂತರಿಕ ಲೆಕ್ಕಪರಿಶೋಧಕರು ಬಂದಿದ್ದರು. ಪ್ರತಿಯೊಂದು ಖಾತೆಯಲ್ಲೂ ಏನಾದರೂ ಲೋಪದೋಷಗಳನ್ನು ಕಂಡುಹಿಡಿದು ಅವುಗಳನ್ನು ಮ್ಯಾನೇಜರರ, ಮೇಲಧಿಕಾರಿಗಳ ಅವಗಾಹನೆಗೆ ತರುವುದು ಅವರ ಕೆಲಸವಾಗಿತ್ತು. ಇಂಥಿಂಥ ತಪ್ಪುಗಳನ್ನು ಈ ಸುತ್ತೋಲೆಯ ಪ್ರಕಾರ ಹೀಗೆ ಸರಿಮಾಡಬೇಕು ಎಂದು ವಿಶದವಾಗಿ ಬರೆಯುವುದು ಅವರ ವಾಡಿಕೆ. ಆ ಶಾಖೆಗೆ ಬಂದ ಲೆಕ್ಕಪರಿಶೋಧಕರು ಬಹಳ ಕ್ರಮಬದ್ಧವಾಗಿ, ಪ್ರತಿಯೊಂದನ್ನೂ ಪರಿಶೀಲಿಸಿ, ದೊಡ್ಡ ವರದಿಯನ್ನೇ ತಯಾರಿಸಿದ್ದರು. ಎಲ್ಲಾ ಮುಗಿದ ಅನಂತರ, ಬ್ಯಾಂಕಿನ ಸುವ್ಯವಸ್ಥೆ, ಸಿಬ್ಬಂದಿ ವರ್ಗಕ್ಕೆ ಬೇಕಾದ ಅನುಕೂಲತೆಗಳನ್ನು ಪರಿಶೀಲಿಸುತ್ತ, ಶೌಚಗೃಹವನ್ನು ವೀಕ್ಷಿಸಿ, ಗಬ್ಬುನಾತ ಹೊಡೆಯುತ್ತಿರುವುದನ್ನು ಕಂಡು, ಹೊರಗೆ ಬಂದು ಸಂಬಂಧಪಟ್ಟ ಅಧಿಕಾರಿಯನ್ನು ಕರೆದು 'ಓಡೊಮಸ್ ಏಕೆ ಬಳಸುವುದಿಲ್ಲ?' ಎಂದು ಪ್ರಶ್ನಿಸಿದರು. ಸುತ್ತೋಲೆಗಳ ಬಗ್ಗೆ ಕೇಳಿ ಕೇಳಿ ಬೇಸತ್ತಿದ್ದ ಅಧಿಕಾರಿ ಕೂಡಲೇ ಈ ರೀತಿ ಬಳಸುವುದು ಯಾವ ಸುತ್ತೋಲೆಯ ಪ್ರಕಾರ ಸರ್ ಎಂದು ಅಮಾಯಕರಾಗಿ ಪ್ರಶ್ನಿಸಿದರು. ಅಲ್ಲಿಯೇ ನೆರೆದಿದ್ದ ಸಿಬ್ಬಂದಿ ವರ್ಗದವರೆಲ್ಲಾ ಘೊಳ್ಳೆಂದು ನಕ್ಕುಬಿಟ್ಟಾಗ ಆ ಲೆಕ್ಕಪರಿಶೋಧಕರ ಹಾಗೂ ಅಧಿಕಾರಿಯ ಮುಖ ನೋಡಬೇಕಿತ್ತು. ವಾಸನೆ ಬರುತ್ತಿದ್ದ ಕಾರಣ ಸಹಜವಾಗಿ ಸಲಹೆಯ ರೂಪದಲ್ಲಿ ಹೇಳಿದ ಮಾತು ಹಾಸ್ಯಕ್ಕೆ ಎಡೆಮಾಡಿಕೊಟ್ಟಿತ್ತು.

೨

ಒಂದು ಶಾಖೆಯಲ್ಲಿ ಎರಡು ಜನ ಗುಮಾಸ್ತರಿದ್ದು, ಅವರ ಮೇಲ್ವಿಚಾರಣೆಗೆ ಒಬ್ಬನೇ ಒಬ್ಬ ಅಧಿಕಾರಿಯಿದ್ದು, ಎಲ್ಲಾ ಜವಾಬ್ದಾರಿ ಅವರ ಮೇಲೆಯೇ ಬಿದ್ದು, ಸಾಕಾಗಿ ಹೋಗಿತ್ತು. ಒಬ್ಬ ಲೆಕ್ಕಾಧಿಕಾರಿಯನ್ನು ಆ ಶಾಖೆಗೆ ತೈನಾತಿ(ಪೋಸ್ಟ್) ಮಾಡಲು ಪ್ರಧಾನ ಕಛೇರಿಗೆ ಬರೆದೂ ಬರೆದೂ ಸಾಕಾಗಿತ್ತು. ಕೊನೆಗೆ ಆ ಮ್ಯಾನೇಜರರು ಹೆಡ್ ಆಫೀಸಿನವರು ಯಾವುದೇ ಕಾರಣ ಕೇಳಿ ಬ್ಯಾಂಕಿನ ಠೇವಣಿಯಲ್ಲಿನ ಪ್ರಗತಿ, ಸಾಲವಸೂಲಿ ಕುರಿತು, ಏಕೆ ಕುಂಠಿತವಾಗಿದೆಯೆಂದು, ಸರಿಯಾಗಿ ವರದಿ ಬರುತ್ತಿಲ್ಲ ಎಂದು ಕೇಳಿದಾಗ 'ಶಾಖೆಗೆ ಲೆಕ್ಕಾಧಿಕಾರಿಯನ್ನು ಕಳುಹಿಸದಿರುವುದರಿಂದ ಹೀಗಾಗಿದೆ' ಎಂದು ಬರೆದು ಕಳುಹಿಸುತ್ತಿದ್ದರು.

ಬ್ಯಾಂಕಿನಲ್ಲಿ ತಿಂಗಳ ಖರ್ಚುಗಳನ್ನು ವಿವರವಾಗಿ ಬರೆದು ವೆಚ್ಚಗಳ ತಪಶೀಲು ಎಂದು ಕಳುಹಿಸುವರು. ಆ ತಿಂಗಳು ಸಿಬ್ಬಂದಿ ವರ್ಗಕ್ಕೆ ವೇತನ ಪರಿಷ್ಕರಣವಾದ ಕಾರಣ ಬಾಕಿ ಸಂಬಳ ಕೊಟ್ಟಾಗ ವೆಚ್ಚಗಳ ಖಾತೆಗೆ ಹೆಚ್ಚು ಖುಣಕೆಯಾಗಿ ಪ್ರತಿ ತಿಂಗಳಿಗಿಂತಲೂ ಹೆಚ್ಚೇ ಖರ್ಚು ಬಂದಿತ್ತು. ಪ್ರಧಾನ ಕಛೇರಿಯವರು ಖರ್ಚು ಏಕೆ ಹೆಚ್ಚು ಬಂದಿದೆಯೆಂದು ಪ್ರಶ್ನಿಸಿ ಬರೆದಾಗ, ಪ್ರತಿ ಸಲದಂತೆ ಆ ವ್ಯವಸ್ಥಾಪಕರು ಮೇಲಿನ ವಾಕ್ಯಗಳನ್ನು ಬರೆದು ಕಳುಹಿಸಿದರು. ಪ್ರಧಾನ ಕಛೇರಿಯವರಿಗೆ ಇದರ ತಲೆಬುಡವೇ ಅರ್ಥವಾಗಲಿಲ್ಲ. ಲೆಕ್ಕಾಧಿಕಾರಿಯನ್ನು ಶಾಖೆಗೆ ತೈನಾತಿ ಮಾಡದಿರುವುದಕ್ಕೂ, ವೆಚ್ಚಗಳ ಖಾತೆಯಲ್ಲಿ ಹೆಚ್ಚಳಕ್ಕೂ ಇರುವ ಸಂಬಂಧವೇನು ಎಂದು ಸುಮ್ಮನಾದರಂತೆ.

೩

ಇದು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ನಡೆದ ಘಟನೆ! ಬ್ಯಾಂಕ್ ಯಾವುದೇ ರೀತಿಯ ಹೆಚ್ಚಿನ ಹಣದ ಸಾಲ ಕೊಟ್ಟಾಗ ಉದರಿ ಖಾತರಿ ನಿಗಮದವರಿಂದ ಸಾಲಕ್ಕೆ ಭದ್ರತೆ ಇದೆ ಎಂದು ಖಾತ್ರಿ ಪಡಿಸಿಕೊಳ್ಳುವುದು ವಾಡಿಕೆ. ಆ ಶಾಖಾ ವ್ಯವಸ್ಥಾಪಕರು ರೂ. 2 ಲಕ್ಷಕ್ಕೆ ಸಾಲ ಮಂಜೂರಾತಿ ಪಡೆಯಲು ಪ್ರಧಾನ ಕಛೇರಿಯವರಿಗೆ ಕಾಗದಪತ್ರಗಳನ್ನು ಕಳುಹಿಸಿದರು. ಪ್ರಧಾನ ಕಛೇರಿಯವರು ಕಾಗದ ಪತ್ರಗಳನ್ನು ಪರಿಶೀಲಿಸಿ 'ಸಿಜಿಸಿ ಕವರ್ ಸೌಲಭ್ಯದ ಅಡಿಯಲ್ಲಿ ಈ ಸಾಲವನ್ನು ಬಿಡುಗಡೆ ಮಾಡಿ' ಎಂದು ಟಿಪ್ಪಣಿ ಬರೆದು ಹಿಂತಿರುಗಿಸಿದರು. ಸಿಜಿಸಿ ಕವರ್ ಬಗ್ಗೆ ಮಾಹಿತಿ ಗೊತ್ತಿಲ್ಲದ ಮ್ಯಾನೇಜರರು ಕೂಡಲೇ ಪ್ರಧಾನ ಕಛೇರಿಗೆ ಈ ರೀತಿ ತಂತಿ ಕಳುಹಿಸಿದರು:

"ಸಿಜಿಸಿ ಕವರುಗಳ ದಾಸ್ತಾನಿಲ್ಲ. ದಯವಿಟ್ಟು ಕೆಲವು ಕವರುಗಳನ್ನು ಕೂಡಲೇ ಕಳುಹಿಸಿದರೆ ಮಂಜೂರಾದ ಸಾಲವನ್ನು ಸಿಜಿಸಿ ಕವರಿನಲ್ಲಿ ಬಿಡುಗಡೆ ಮಾಡುವುದು ಸಾಧ್ಯವಾದೀತು."

ಪ್ರಧಾನ ಕಛೇರಿಯವರು ಕವರ್ ಕಳುಹಿಸದೆ, ಸಿಜಿಸಿ ಬಗ್ಗೆ ಮಾಹಿತಿ ಇರುವ ಸುತ್ತೋಲೆ ಕಳುಹಿಸಿದರಂತೆ.

೪

ಅದೊಂದು ದಿನ ಚಾಲ್ತಿ ಖಾತೆ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ನನ್ನ ಮಿತ್ರರೊಬ್ಬರಿಗೆ ಆದ ಅನುಭವ ಇದು. ಸುಮಾರು 2–30ರ ವೇಳೆಗೆ, ಅಂದರೆ ಬ್ಯಾಂಕಿನ ಕೆಲಸದ ವೇಳೆ ಮುಗಿಯುವ ಸಮಯದಲ್ಲಿ, ಒಬ್ಬ ವ್ಯಕ್ತಿ ಕೌಂಟರಿನ ಬಳಿ ಬಂದು ರೂ. 10,000/–ದ ಚೆಕ್ಕೊಂದನ್ನು ಪಾವತಿಗಾಗಿ ಕೊಟ್ಟ. ಬಹಳ ರಷ್ ಇದ್ದ ಕಾರಣ ಹಾಗೂ ಊಟದ ವೇಳೆ ಸಮೀಪಿಸುತ್ತಿದ್ದ ಕಾರಣ ನನ್ನ ಮಿತ್ರ ಖಾತೆಯಲ್ಲಿನ ಶಿಲ್ಕು ನೋಡಿ, ಹಣ ಇಲ್ಲವೆಂದು ಸೂಕ್ಷ್ಮವಾಗಿ ಹೇಳಿದರೆ, ಆ ಗ್ರಾಹಕ ಮಹಾಶಯ ಏನು ಹೇಳಬೇಕು ಗೊತ್ತೆ? ಇಷ್ಟು ದೊಡ್ಡ ಬ್ಯಾಂಕ್ ಇಟ್ಟುಕೊಂಡು ಹಣವಿಲ್ಲವೆಂದರೇನು? ಎಂದು ಹಾರಾಡಲು ಬಂದ. ಸ್ವಾಮಿ, ಬ್ಯಾಂಕಿನಲ್ಲಿ ಸಾಕಷ್ಟು ಹಣವಿದೆ. ಆದರೆ ನಿಮ್ಮ ಖಾತೆ

ಯಲ್ಲಿ ಈ ಚೆಕ್ಕಿನ ಮೊತ್ತಕ್ಕೆ ಸರಿಹೊಂದುವಷ್ಟು ಹಣ ಇಲ್ಲವೆಂದು ಹೇಳಿ ಕಳುಹಿಸುವದರಲ್ಲಿ ಸಾಕಾಗಿಹೋಗಿತ್ತು.

*

ರಾಷ್ಟ್ರದಲ್ಲಿಯೇ ಅತಿ ಹೆಚ್ಚಿನ ಶಾಖೆಗಳುಳ್ಳ ಬ್ಯಾಂಕಿನ ಶಾಖೆಯೊಂದರಲ್ಲಿ ನಡೆದ ಘಟನೆ ಇದು : ಬ್ಯಾಂಕಿನ ಕೆಲಸ ತ್ವರಿತವಾಗಲೆಂದು ಹಾಗೂ ಉತ್ತಮ ಗ್ರಾಹಕರ ಸೇವೆಗಾಗಿ ಬ್ಯಾಂಕಿನ ಕೆಲ ಕೆಲಸಗಳಲ್ಲಿ ಗಣಕವನ್ನು (ಕಂಪ್ಯೂಟರ್) ಬಳಸಲು ಒಪ್ಪಂದವಾದ ಅನಂತರ, ಕಂಪ್ಯೂಟರ್ ಬಳಸುವ ಸಿಬ್ಬಂದಿಗೆ ಹೆಚ್ಚಿನ ಭತ್ಯ ಕೊಡಲು ಸುತ್ತೋಲೆ ಹೊರಡಿಸಿದರು. ಶಾಖೆಯಲ್ಲಿನ ಹಿರಿಯ ಸಹೋದ್ಯೋಗಿಯೊಬ್ಬರು ಆ ವರ್ಷವೆಲ್ಲಾ 'ಬಾಕಿ' ಎಂದು ಬಹಳಷ್ಟು ಹಣ ಪಡೆದಿದ್ದರು. ಈ ಸುತ್ತೋಲೆ ನೋಡಿದ ಅನಂತರ ಇದರ ಬಾಕಿಯೂ ಏನಾದರೂ ಬರಬಹುದೆಂದು ವಿಚಾರ ಮಾಡಿ, ಸುತ್ತೋಲೆಯನ್ನು ಸ್ಪಷ್ಟವಾಗಿ ಓದದೆ, ನಾನು ಐದು ವರ್ಷಗಳಿಂದಲೂ ಗಣಕವನ್ನು ಬಳಸುತ್ತಿದ್ದೇನೆ. ಅದರ ಬಾಬ್ತು ಬಾಕಿ ಕೊಡಿ ಎಂದು ಅರ್ಜಿ ಬರೆದೇಬಿಟ್ಟರು. ಪಾಪ ಅವರು ಬಳಸುತ್ತಿದ್ದುದು ಗಣಕವಲ್ಲ, ಲೆಕ್ಕಾಚಾರ ಯಂತ್ರ (ಗುಣಕ-ಕ್ಯಾಲ್ಕುಲೇಟರ್). ಅದೂ ಒಂದು ಕಂಪ್ಯೂಟರ್ ಎಂದು ಆತ ಭಾವಿಸಿ, ಅರ್ಜಿ ಬರೆದಿದ್ದಿರಬಹುದು. ಮೇಲಿನ ಅಧಿಕಾರಿಗಳಿಗೆ, ಈ ವರ್ಷವೇ ತಾವು ಕಂಪ್ಯೂಟರ್ ಬಳಸಲು ನಿರ್ಧರಿಸಿರುವಾಗ, ಈ ಉದ್ಯೋಗಿ ಅದು ಹೇಗೆ ಐದು ವರ್ಷದಿಂದಲೂ ಕಂಪ್ಯೂಟರ್ ಬಳಸುತ್ತಿದ್ದರೆಂಬುದು ಚಿದಂಬರರಹಸ್ಯವಾಯಿತು. ★

● ● ●

## ಬ್ಯಾಂಕಿನಲ್ಲಿ ಯಂತ್ರಮಾನವ

ಯಂತ್ರಪ್ರಿಯ ನಗರವಾಸಿಯೊಬ್ಬ ರಜೆಯಲ್ಲಿ ತನ್ನ ಹುಟ್ಟೂರಿಗೆ ಹೋದ. ಅಲ್ಲಿ ಎಲ್ಲರೂ ಹಳೆಯ ರೀತಿಯಲ್ಲೇ ಕೆಲಸ ಮಾಡುತ್ತಿದ್ದರು. ಬಡಗಿಯೊಬ್ಬ ಮರ ಕೊಯ್ಯುತ್ತಿದ್ದ. ನಮ್ಮ ನಗರವಾಸಿ ಆಧುನಾತನೋತ್ಸಾಹಿ ಅವನ ಬಳಿಗೆ ಹೋಗಿ ಮಾತಿನಲ್ಲಿ ತೊಡಗಿದ. 'ಗರಗಸ ಹಿಡಿದು ಕೊಯ್ದು ಕೊಯ್ದು ರಟ್ಟೆ ನೋವು ಯಾಕೆ ಬರಿಸಿಕೋತೀಯ ? ವಿದ್ಯುತ್ತಿನ ಕೊಯ್ಯುವ ಯಂತ್ರ ತಕೋಬಾರದೆ ? ಆದರಿಂದ ನೀನು ಇಷ್ಟೇ ಸಮಯದಲ್ಲಿ ಎರಡರಷ್ಟು ಕೊಯ್ಯಬಹುದು.'

ಮರ ಕೊಯ್ಯುತ್ತಿದ್ದ ಮುದುಕ ತಲೆ ಅಲ್ಲಾಡಿಸಿ ನಗುತ್ತ ಹೇಳಿದ. 'ನನಗೆ ಎರಡರಷ್ಟು ಬೇಡವಲ್ಲ ?'

ಯಂತ್ರ ಸಲಕರಣೆಗಳು ಬಹಳ ಉಪಯುಕ್ತವಾಗಿರಬಹುದು, ಅವುಗಳಿಂದ ಸಮಯದ ಉಳಿತಾಯವೂ ಆಗಬಹುದು, ಭವಿಷ್ಯದಲ್ಲಿ ರೋಬೊ ನಗದಿಗಾರರೂ ಬರಬಹುದು. ಆದರೆ ಬಿಳಿಯ ರವಿಕೆ ತೊಟ್ಟು, ಪ್ರತಿಯೊಬ್ಬರು ಬಂದಾಗಲೂ ನಗುನಗುತ್ತ, ಬೆನ್ನು ಬಗ್ಗಿಸಿ ತನ್ನ ಕೆಲಸದಲ್ಲಿ ತೊಡಗಿರುವ ನಗದುಗಾರ್ತಿ ಅದೃಶ್ಯವಾದರೆ ಅನೇಕ ಗ್ರಾಹಕರಿಗೆ ಬ್ಯಾಂಕು ಹಿಡಿಸದಿರುವುದಿಲ್ಲ.

—ಟಿ. ಆರ್. ಗಿಲ್ಬರ್ಟ್

# ಅನುಪಾಶ್ರಯಣೀಕರಣ

ಮೂಲ: ಅರ್ನ್ಸ್ಟ್ ಹಗ್
ಅನುವಾದ: ಸಾಮೂಹಿಕ

**ರಫ್ತು ವ್ಯಾಪಾರ ಧನಪೋಷಣೆಯ ನಷ್ಟ ಸಂಭವಗಳನ್ನು ಕನಿಷ್ಠಗೊಳಿಸಲು ಅನುಸರಿಸಲಾಗುತ್ತಿರುವ, ಸಾಪೇಕ್ಷವಾಗಿ ಇನ್ನೂ ಹೊಸದೆನಿಸುವ ತಂತ್ರವನ್ನು ಸೂಚಿಸಲು ಸಾರ್ವತ್ರಿಕವಾಗಿ ಸ್ವೀಕೃತವಾಗಿರುವ ಮೂಲ ಪದವೇ ಅನುಪಾಶ್ರಯಣೀಕರಣ (forfaiting). PROSPECTS 4/1984ರಲ್ಲಿ ಪ್ರಕಟವಾದ ಈ ಲೇಖನದಲ್ಲಿ ಈ ಸಂಲೇಖದ ವಿವಿಧ ಮುಖಗಳನ್ನು ಹೆಚ್ಚು ವಿವರವಾಗಿ ಚರ್ಚಿಸಲಾಗಿದೆ.**

ಐರೋಪ್ಯಪರಿಸ್ಥಿತಿಗೆ ಬಹುತೇಕ ಸಂಪೂರ್ಣವಾಗಿ ಸೀಮಿತಗೊಂಡಿದ್ದ—ಅದರಲ್ಲೂ ಸಮಾಜವಾದಿ ದೇಶಗಳೊಡನೆ ವ್ಯಾಪಾರಕ್ಕೆ ಹೆಚ್ಚು ಒತ್ತು ಇದ್ದ—ಸುಮಾರು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಬಹಳ ಹಿಂದೆಯೇ ಅನುಪಾಶ್ರಯಣೀಕರಣ ವಿಧಾನವು ಪರೀಕ್ಷಾ ಹಂತವನ್ನು ದಾಟಿತ್ತು. ಈಗ ಇದು ಕ್ಷಿಪ್ರವಾಗಿ ಎಲ್ಲ ಖಂಡಗಳಿಗೂ ಹರಡುತ್ತಿದೆ. ಅಲ್ಲದೆ ಒಂದು ಸಮರ್ಥವಾದ ಮತ್ತು ಕೆಲವು ಸಂದರ್ಭಗಳಲ್ಲಿ ರೂಢಿಗತ ರಫ್ತು ಧನಪೋಷಣೆಯ ವಿಧಾನಗಳಿಗೆ ಅತ್ಯಂತ ಅನುಕೂಲಕರವಾದ ಪರ್ಯಾಯವಾಗುತ್ತಿದೆ.

ಅನೇಕ ಕಂಪನಿಗಳು—ಸ್ವಿಸ್ ಬ್ಯಾಂಕಿಂಗ್ ಕಾರ್ಪೊರೇಷನ್ನಿನ ಅಧೀನ ಸಂಸ್ಥೆಯಾದ ಜೂರಿಚ್ ನೆಲೆಯ ಇಂಡೆಲಾಕ್ ಫೈನಾನ್ಸ್ ಎಸ್.ಎ. ಅವುಗಳ ಪೈಕಿ ಒಂದು—ಈ ಕ್ಷೇತ್ರದಲ್ಲಿ ವಿಶೇಷ ಪರಿಣತಿ ಹೊಂದಿವೆ. ಇವು ಬೆಳೆಯುತ್ತಿರುವ ಅಂತರರಾಷ್ಟ್ರೀಯ ಅನುಪಾಶ್ರಯಣೀಕರಣ ಮಾರುಕಟ್ಟೆಯ ಅಂಗವಾಗಿವೆ. ನೇರವಾಗಿ ಅಥವಾ ತಮ್ಮ ಬ್ಯಾಂಕುಗಳ ಮಧ್ಯಸ್ತಿಕೆಯ ಮೂಲಕ ಅನುಪಾಶ್ರಯಣೀಕರಣ ಸೌಲಭ್ಯಗಳನ್ನು ಈ ಸಂಸ್ಥೆಗಳು ರಫ್ತುದಾರರಿಗೆ ನೀಡುತ್ತಿವೆ.

**ಅನುಪಾಶ್ರಯಣೀಕರಣ ಎಂದರೇನು?**

ಅನುಪಾಶ್ರಯಣೀಕರಣ ರಫ್ತುದಾರನಿಗೆ ಉಪಾಶ್ರಯಣವಿಲ್ಲದ (recourse) ಒಂದು ವ್ಯಾಪಾರೀ ಧನಪೋಷಣ ಸಂಲೇಖ. ರಫ್ತುದಾರನ ಉಪಾಶ್ರಯಿಸುವ ಯಾವ ಹಕ್ಕೂ ಇಲ್ಲದಂತೆ, ರಫ್ತುದಾರರಿಂದ ಅನುಪಾಶ್ರಯಣಕಾರ ವ್ಯಾಪಾರಿ ಋಣಗಳನ್ನು ಖರೀದಿಸುವುದು ಅಥವಾ ಅನುಪಾಶ್ರಯಣಕಾರನಿಗೆ ಸರಕುಗಳ ಮೇಲಿನ ಪಾವತಿಯ ಅಥವಾ ಸೇವೆಗಳ ಮೇಲಿನ ಹಕ್ಕುಗಳನ್ನು ರಫ್ತುದಾರ ನಿಯೋಜಿಸುವುದು ಎಂದು ಇದರ ಅರ್ಥ. ಅನುಪಾಶ್ರಯಣೀಕರಣದಿಂದ ರಫ್ತುದಾರನಿಗೆ ಆಗುವ ಮುಖ್ಯ ಲಾಭಗಳು ಈ ಮುಂದಿನವು:

ಅನುಪಾಶ್ರಯಣಕಾರ ಶೇಕಡ 100ರಷ್ಟು ವಾಣಿಜ್ಯಕ, ರಾಜಕೀಯ ಮತ್ತು ವರ್ಗಾವಣೆ ನಷ್ಟಸಂಭವವನ್ನು ತಳೆಯುತ್ತಾನೆ. ತತ್ಫಲವಾಗಿ ಈ ನಷ್ಟಸಂಭವಗಳ ಭಾಗಾಂಶವನ್ನು ಸರ್ಕಾರಿ ಸಂಚಾಲಿತ ರಫ್ತು ಧನಪೋಷಣೆ ಯೋಜನೆಗಳ ಅಡಿಯಲ್ಲಿನ ಷರತ್ತಿನಲ್ಲಿರುವಂತೆ ರಫ್ತುದಾರ ಭರಿಸಬೇಕಾದ್ದಿಲ್ಲ.

ಒಂದು ಕಡೆ ಸರಬರಾಜುದಾರ ತನ್ನ ಗ್ರಾಹಕರಿಗೆ ಉದರಿ ನೀಡುವ ಸ್ಥಿತಿಯಲ್ಲಿರುತ್ತಾನೆ. ತನ್ಮೂಲಕ ತನ್ನ ನೀಡಿಕೆಯನ್ನು ಹೆಚ್ಚು ಸ್ಪರ್ಧಾತ್ಮಕವಾಗಿರುವಂತೆ ಮಾಡುತ್ತಾನೆ. ಇನ್ನೊಂದು ಕಡೆ ಅನುಪಾಶ್ರಯಣೀಕರಣವನ್ನು ಬಳಸಿ ಅವನು ಉದರಿ ವಹಿವಾಟನ್ನು ನಗದು ವಹಿವಾಟಾಗಿ ಪರಿವರ್ತಿಸುತ್ತಾನೆ.

ಇದು ರಫ್ತುದಾರನ ದ್ರವತ್ವಸ್ಥಿತಿಯನ್ನು ಉತ್ತಮಗೊಳಿಸುತ್ತದೆ. ಅದೇ ಸಮಯದಲ್ಲಿ ಅವನ ಸ್ಥಿತಿವಿವರಣ ಪಟ್ಟಿಯನ್ನು ಯಾವುದೇ ಸಂಭವನೀಯ ಹೊಣೆಯಿಂದ ಮುಕ್ತಗೊಳಿಸುತ್ತದೆ.

ರಫ್ತು ಧನಪೋಷಣೆಯ ಸಾಂಪ್ರದಾಯಿಕ ಮಾರ್ಗಗಳಂತಲ್ಲದೆ ಅನುಪಾಶ್ರಯಣೀಕರಣವನ್ನು ಸಾಮಾನ್ಯವಾಗಿ ಒಂದು ನಿಷ್ಕೃಷ್ಟ ದರದ ಆಧಾರದ ಮೇಲೆ ಸಾಮಾನ್ಯವಾಗಿ ನೀಡಲಾಗುತ್ತದೆ. ಈ ರೀತಿ ಸರಬರಾಜುದಾರ ಬಡ್ಡಿದರದ ಏರಿಳಿತಗಳನ್ನು ಅಲಕ್ಷಿಸಿ ಧನಪೋಷಣೆಯ ವೆಚ್ಚಗಳನ್ನು ನಿಷ್ಕೃಷ್ಟವಾಗಿ ಲೆಕ್ಕಮಾಡಿಕೊಳ್ಳಬಹುದು.

—ಸಂಸ್ಥೆಗಳಾದಂಥ, ಸ್ವಿಟ್ಜರ್ಲೆಂಡ್‌ನ ಇಆರ್‌ಜಿ, ಪಶ್ಚಿಮ ಜರ್ಮನಿಯ ಹರ್ಮೆಸ್, ಅಮೆರಿಕ ಸಂಯುಕ್ತಸಂಸ್ಥಾನದ ರಫ್ತುಮದು ಸಂಸ್ಥೆ (Exim)–ಇವು ನೀಡುವ ಸರ್ಕಾರಿ ಬೆಂಬಲಿತ ರಫ್ತು ಉದರಿ ಖಾತರಿಗಳು ಅಗತ್ಯವಿಲ್ಲ. ಇದರಿಂದಾಗಿ ಅಂಥ ಖಾತರಿಗಳ ಚಂದಾ ಹಣದಲ್ಲಿ ಉಳಿತಾಯ ಹಾಗೂ ಆಡಳಿತ ವೆಚ್ಚದಲ್ಲಿ ಸಾಕಷ್ಟು ಕಡಿತವಾಗುತ್ತದೆ.

---

Ernst Hug: Forfaiting—An Alternative in Export Financing, *Economic and Financial Prospects*, No. 4/1984, Swis Bank Corporation, Basle, Switzerland

ಇಂಡೆಲಕ್‌ನಂಥ ಕೆಲವು ಅನುಪಾಶ್ರಯಣಕಾರರು ಆಮದುದಾರರಿಂದ ಸರಬರಾಜು ಆದೇಶವನ್ನು ಕೊಡುವಾಗ ಯಾವುದೇ ರೀತಿಯಲ್ಲಿ ತತ್‌ಕ್ಷಣ ಪಾವತಿಯ ಒತ್ತಾಯ ಮಾಡುವುದಿಲ್ಲ ಮತ್ತು ಕರಾರು ಮೌಲ್ಯದ ಶೇಕಡ 100ರಷ್ಟು ಧನಪೋಷಣೆ ಮಾಡಲು ತತ್ತ್ವಶಃ ಒಪ್ಪುತ್ತಾರೆ.

—ರಫ್ತುದಾರನಿಗೆ ಇತರ ರೀತಿಯ ಸ್ರಸಾಮಾನ್ಯ ಬ್ಯಾಂಕು ಉದರಿ ಅವಕಾಶಗಳು ತೆರೆದಿರುತ್ತವೆ ಮತ್ತು ಇತರ ಹಣಕಾಸು ಅಗತ್ಯಗಳಿಗೆ ಅವು ಲಭ್ಯವಿರುತ್ತದೆ.

—ವಸೂಲಿಯ ಕೆಲಸ ಮತ್ತು ವೆಚ್ಚಗಳನ್ನು ಮತ್ತು ತತ್ಸಂಬಂಧ ಆಡಳಿತಾತ್ಮಕ ಕಾರ್ಯಗಳನ್ನು ಅನುಪಾಶ್ರಯಣಕಾರ ವಹಿಸಿಕೊಳ್ಳುತ್ತಾನೆ.

ಅನುಪಾಶ್ರಯಣಕಾರ ಸಂಸ್ಥೆಗಳು ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ ಮತ್ತು ಮುನ್ನೋಟಗಳನ್ನು ಕುರಿತ ತಮ್ಮ ನಿರ್ಧಾರವನ್ನು ಅವಲಂಬಿಸಿ 180 ದಿನಗಳಿಂದ 2 ವರ್ಷಗಳ ವರೆಗಿನ ಉದರಿ ಅವಧಿಗಳಿಗೆ ಹೆಚ್ಚು ಸಂಖ್ಯೆಯ ದೇಶಗಳಿಗೆ ಸೌಲಭ್ಯಗಳನ್ನು ನೀಡುವ ಸ್ಥಿತಿಯಲ್ಲಿವೆ.

ಹಲವಾರು ಅನುಪಾಶ್ರಯಣಕಾರ ಸಂಸ್ಥೆಗಳು ಅನುಪಾಶ್ರಯಣ "ವಟ್ಟದರ"ಗಳನ್ನು ನೀಡುವ ಪ್ರಕಟಣೆಗಳನ್ನು ನಿಯತವಾಗಿ ನೀಡುತ್ತವೆ. ಡಾಯಿಷ್ ಮಾರ್ಕ್, ಅಮೆರಿಕದ ಡಾಲರು, ಸ್ವಿಸ್ ಫ್ರಾಂಕು, ಇಂಥ ಪದೇ ಪದೇ ಬಳಸಲಾಗುವ ಚಲಾರ್ಥಗಳಲ್ಲಿ ನಮೂದಿಸಲಾದ ವಹಿವಾಟುಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟ ದೇಶಗಳಿಗೆ ಅನ್ವಯವಾಗುವ ಸೂಚಕ ನೇರ ವಟ್ಟ ದರಗಳನ್ನು ಈ ಪ್ರಕಟಣೆಗಳು ತೋರಿಸುತ್ತವೆ. ಇತರ ಪರಿವರ್ತನೀಯ ಚಲಾರ್ಥಗಳನ್ನು ಕುರಿತಂತೆ ನಮೂದುಗಳನ್ನು ಕೋರಿಕೆ ಮೇರೆಗೆ ಒದಗಿಸಲಾಗುವುದು.

ಒಂದು ನಿರ್ದಿಷ್ಟ ದೇಶದಲ್ಲಿ ಅನುಪಾಶ್ರಯಣಕಾರನ ಕಾರ್ಯಾಚರಣೆಗಳು ಸಾಮಾನ್ಯವಾಗಿ ಆ ದೇಶದ ರಫ್ತಿನ ಅನುಪಾಶ್ರಯಣಕ್ಕೆ ಸೀಮಿತಗೊಂಡಿಲ್ಲ. ತಾವು ನೀಡುವ ಸೌಲಭ್ಯಗಳು ಪ್ರಪಂಚಾದ್ಯಂತ ರಫ್ತುದಾರರಿಗೆ ಲಭ್ಯವಿರುವಂತೆ ಅವನು ಮಾಡುತ್ತಾನೆ.

ಹೀಗೆ, ಉದಾಹರಣೆಗೆ, ಪಶ್ಚಿಮ ಯೂರೋಪಿನ, ಅದರಲ್ಲೂ ಪಶ್ಚಿಮ ಜರ್ಮನಿ ಮತ್ತು ಇಟಲಿಯ, ಬ್ಯಾಂಕುಗಳು ಮತ್ತು ಸರಬರಾಯಿದಾರರು ಸ್ವಿಸ್ ಅನುಪಾಶ್ರಯಣಕಾರರ ಸೇವೆಗಳನ್ನು ಬಳಸಿಕೊಂಡಿದ್ದಾರೆ ಮತ್ತು ಕಳೆದ ಕೆಲವು ವರ್ಷಗಳಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ಅನುಭೋಗಿ ಹಾಗೂ ಬಂಡವಾಳ ಸರಕುಗಳೆರಡರ ರಫ್ತುದಾರರು ತಮ್ಮ ವ್ಯಾಪಾರ ಪ್ರಾಪ್ಯಗಳ ವಿಕ್ರಯಕ್ಕೆ ಅನುಪಾಶ್ರಯಣವನ್ನು ಬಳಸಲು ಕಾತರರಾಗಿದ್ದಾರೆ.

**ಇದನ್ನು ಹೇಗೆ ಮಾಡಲಾಗುತ್ತದೆ**

ಅನುಪಾಶ್ರಯಣೀಕರಣದ ನಿಖರವಾದ ಕಾರ್ಯಗಳು ಸಂಸ್ಥೆಯಿಂದ ಸಂಸ್ಥೆಗೆ ಅಲ್ಪಸ್ವಲ್ಪ ಬದಲಾಗುತ್ತವೆ. ಈ ಮುಂದಿನ ವಿವರಣೆ ಇಂಡಲೆಕ್‌ಗೆ ಮಾತ್ರ ಅನ್ವಯವಾಗುತ್ತದೆ.

ವಾಣಿಜ್ಯ ಕರಾರಿನ ಪ್ರಸ್ತಾವವೊಂದನ್ನು ಸಲ್ಲಿಸುವುದಕ್ಕೆ ಮೊದಲೇ ಒಂದು ಅನುಪಾಶ್ರಯಣೀಕರಣ ದರಖಾಸ್ತನ್ನು ಪಡೆದುಕೊಳ್ಳುವಂತೆ ಸರಬರಾಜುದಾರನಿಗೆ ಅನುಪಾಶ್ರಯಣಕಾರ ಶಿಫಾರಸ್ಸು ಮಾಡುತ್ತಾನೆ. ಸೂಚಕ ದರಖಾಸ್ತುಗಳ ಹೊರತು ಉಳಿದಂತೆ ದಸ್ತೈವಜೀಕರಣದ ವಿನ್ಯಾಸ ಮತ್ತು ಕಾರ್ಯಾಚರಣೆಯ ಒಂದು ಲೆಕ್ಕಾಚಾರದ ಬಗೆಗೆ ಅಧಿಕ ಮಾಹಿತಿಯನ್ನು ರಫ್ತುದಾರನಿಗೆ ಒದಗಿಸಲಾಗುತ್ತದೆ.

ವಾಣಿಜ್ಯ ಕರಾರಿಗೆ ರುಜು ಹಾಕುವ ಮೊದಲು ತನ್ನ ಸೂಚಕ ದರಖಾಸ್ತುಗಳನ್ನು ಒಂದು ದೃಢ ಆಯ್ಕೆಯನ್ನಾಗಿ ಅನುಪಾಶ್ರಯಣಕಾರ ಬದಲಾಯಿಸಿಕೊಳ್ಳುತ್ತಾನೆ. ಇದನ್ನು ಬಿಕರಿ ಕರಾರಿನ ನೆರವೇರಿಕೆಯ ದೃಢಬದ್ಧತೆಯಾಗಿ ಪರಿವರ್ತಿಸಲಾಗುತ್ತದೆ. ಬಹುತೇಕ ಸಂದರ್ಭಗಳಲ್ಲಿ ಸರಬರಾಜುದಾರನ ಉದರಿಗೆ ಆನುಷಂಗಿಕವಾಗಿ ನಿರ್ವಹಣೆಯಾಗುವಂತೆ ರಫ್ತುದಾರನ ಹೆಸರಿಗೆ ಸ್ಥಳೀಯ ಬ್ಯಾಂಕೊಂದರ ಖಾತರಿಯನ್ನು ಆಮದುದಾರ ನೀಡಬೇಕಾಗುತ್ತದೆ. ಅದೇನೇ ಇರಲಿ, ಆಮದುದಾರ ಪ್ರಥಮ ದರ್ಜೆಯ ಗಣ್ಯತೆಯನ್ನು ಹೊಂದಿದವನಾಗಿದ್ದರೆ ಅಥವಾ ಒಂದು ಸರ್ಕಾರಿ ಅಭಿಕರಣವಾಗಿದ್ದರೆ ಖಾತರಿ ಅಗತ್ಯವಿಲ್ಲ.

ಹತ್ತು ಸಮಾನ ಅರ್ಧವಾರ್ಷಿಕ ಕಂತುಗಳಲ್ಲಿ ಮರುಪಾವತಿಯಾಗಬೇಕಾದ ಐದು ವರ್ಷಗಳ ಅಂತಿಮ ಅವಧಿಯ ಉದರಿಯನ್ನು ಊಹಿಸಿಕೊಳ್ಳುವುದಾದರೆ, ಆಮದುದಾರ ರಫ್ತುದಾರನ ಆದೇಶಕ್ಕೆ ಪಾವತಿಯಾಗುವಂತೆ ಹತ್ತು ವಚನಪತ್ರಗಳನ್ನು ನೀಡುತ್ತಾನೆ. ಪ್ರತಿಯೊಂದು ವಚನ ಪತ್ರದಲ್ಲೂ ಉದರಿಯ ಮೊಬಲಗಿನ $\frac{1}{10}$ರಷ್ಟನ್ನು ಸೂಚಿಸುವ ಒಂದೇ ಅಸಲು ಭಾಗ ಮತ್ತು ತೆರೆದ ಅಸಲಿನ ಶಿಲ್ಕಿನ ಮೇಲೆ ಖರೀದಿದಾರನ ಬಡ್ಡಿ ಸೇರುತ್ತವೆ. ಸರಕುಗಳನ್ನು ಸಾಗಣೆಗಾಗಿ ಹಡಗಿಗೆ ರವಾನಿಸುವ ಸಂದರ್ಭದಲ್ಲಿ ಹಡಗು ರವಾನೆ ದಸ್ತೈವಜುಗಳ ವಿನಿಮಯವಾಗಿ ಬ್ಯಾಂಕ್ ಖಾತರಿಯೊಡನೆ ವಚನಪತ್ರಗಳನ್ನು ರಫ್ತುದಾರನಿಗೆ ಬಿಡುಗಡೆ ಮಾಡಲಾಗುತ್ತದೆ. ಅನುಪಾಶ್ರಯಣಕಾರನ ಆದೇಶಕ್ಕೆ ವಚನಪತ್ರಗಳನ್ನು ರಫ್ತುದಾರ ಹಿಂಬರಹ ಮಾಡಿಕೊಡುತ್ತಾನೆ. ಆ ಹಿಂಬರಹಕ್ಕೆ 'ಉಪಾಶ್ರಯಣವಿಲ್ಲದೆ' (ವಿಥೌಟ್ ರಿಕೋರ್ಸ್) ಎಂಬ ಷರತ್ತನ್ನು ಸೇರಿಸುತ್ತಾನೆ. ಮತ್ತು ಅದೇ ಸಮಯದಲ್ಲಿ ಬ್ಯಾಂಕ್ ಖಾತರಿಗೆ ಸಂಬಂಧಿಸಿದ ಹಕ್ಕುಗಳನ್ನು ಪ್ರತ್ಯೇಕ ಹೇಳಿಕೆಯ ಮೂಲಕ ನಿಯೋಜಿಸುತ್ತಾನೆ. ವಚನಪತ್ರ ಮತ್ತು ಬ್ಯಾಂಕ್ ಖಾತರಿಗಳನ್ನು ಸ್ವೀಕರಿಸಿದ ಅನಂತರ ಇಂಡಲೆಕ್ ಸಂಸ್ಥೆ ಈ ದಸ್ತೈವಜುಗಳ ಮೇಲಿನ ಸಹಿಗಳನ್ನು ಸರಿನೋಡುತ್ತದೆ. ಅನಂತರ ಪ್ರತಿಯೊಂದು ವಚನಪತ್ರವನ್ನೂ ವಟಾಯಿಸುತ್ತದೆ ಮತ್ತು ನಿವ್ವಳ ವಟಾಯಿತ ಮೌಲ್ಯವನ್ನು (ಅನುಪಾಶ್ರಯಣದ ಹುಟ್ಟುವಳಿ) ರಫ್ತುದಾರನಿಗೆ ಪಾವತಿ ಮಾಡುತ್ತದೆ. ಅನುಪಾಶ್ರಯಣೀಕರಿಸಬಹುದಾದ ವ್ಯಾಪಾರ ಋಣಸಂಬಂಧಿಗಳ ಇತರ ರೂಪಗಳೆಂದರೆ ಹುಂಡಿಗಳು, ಡ್ರಾಫ್ಟುಗಳು ಮತ್ತು ಪಾವತಿ ಮುಂತಳ್ಳಿದ ಉದರಿ ಪತ್ರಗಳು. ಪ್ರತ್ಯೇಕವಾದ ಖಾತರಿ ದಸ್ತೈವಜೊಂದನ್ನು ನೀಡುವ ಬದಲು, ಆಮದುದಾರ ಪಾವತಿ ಮಾಡದಿದ್ದಲ್ಲಿ ರದ್ದು ಮಾಡಲಾಗದ ಬೇಷರತ್ ಪಾವತಿ ಎಂಬರ್ಥ ಬರುವ ಅವಲ್ (Aval) ಎಂಬ ಹಿಂಬರಹವುಳ್ಳ ಪತ್ರಗಳು ಅಥವಾ ಹುಂಡಿಗಳತ್ತ ಕೆಲವು ಬ್ಯಾಂಕುಗಳು ಹೆಚ್ಚು ಒಲವು ತೋರುತ್ತವೆ.

**ಅನುಪಾಶ್ರಯಣೀಕರಣದ ವೆಚ್ಚಗಳೇನು ?**

ಅನುಪಾಶ್ರಿಯಣಕಾರ ವಾಣಿಜ್ಯ, ರಾಜಕೀಯ ಮತ್ತು ವರ್ಗಾವಣೆ ನಷ್ಟ ಸಂಭವದ ಶೇ. 100ರಷ್ಟನ್ನು ವಹಿಸಿಕೊಳ್ಳುವನೆಂಬುದು ನಿಜಸಂಗತಿಯಾದಾಗ್ಯೂ, ಸ್ಥಿರ ದರ ವ್ಯಾಪಾರ ಧನಪೋಷಣೆಯ ಇತರ ಮೂಲಗಳೊಡನೆ ಹೋಲಿಸಿದಾಗ ಅನುಪಾಶ್ರಯಣೀಕರಣದ ವೆಚ್ಚಗಳು ತೌಲನಿಕವಾಗಿ ಅನುಕೂಲಕರವಾಗಿವೆ. ಉದಾಹರಣೆಗೆ, ಇಂಡಲೆಕ್, ಸಂಬಂಧಿತ ಅವಧಿಗೆ ಲಂಡನ್ ಅಂತರ ಬ್ಯಾಂಕ್ ಪ್ರಸ್ತಾವದರಕ್ಕೆ (LIBOR) ಸಮನಾದ ತನ್ನ

ಪುನರ್ಧನ ವೆಚ್ಚಕ್ಕೆ ಆಮದುದಾರ ದೇಶದ ರಾಜಕೀಯ ಹಾಗೂ ವಾಣಿಜ್ಯ ನಷ್ಟ ಸಂಭವದ ಮೌಲ್ಯಮಾಪನ, ಜಾಮೀನುದಾರನ ಸ್ಥಾನಮಾನ, ಉದರಿಯ ಅವಧಿ, ರಫ್ತು ವಹಿವಾಟಿನ ಸ್ವರೂಪ ಹಾಗೂ ಗಾತ್ರ ಇವುಗಳನ್ನು ಆಧರಿಸಿದ ಭಾಗಾಂಶವೊಂದನ್ನು (ಮಾರ್ಜಿನ್) ಸೇರಿಸುತ್ತದೆ.

ಅನುಪಾಶ್ರಯಣ ಖರೀದಿಗಾಗಿ ಸೂಚಕ ನೇರ ದರಗಳು

| ದೇಶ | ಡಾಯಿಷ್ ಮಾರ್ಕ್ | ಅಮೆರಿಕಾ ಡಾಲರ್ | ಸ್ವಿಸ್ ಫ್ರಾಂಕ್ |
|---|---|---|---|
| ಅಸ್ಟ್ರೇಲಿಯ | $7\frac{3}{8}$ | $11\frac{3}{4}$ | $5\frac{7}{8}$ |
| ಬಲ್ಗೇರಿಯ | $7\frac{7}{8}$ | $12\frac{1}{8}$ | $6\frac{1}{2}$ |
| ಚೀನ | $7\frac{5}{8}$ | $11\frac{7}{8}$ | $6\frac{1}{4}$ |
| ಸಿಎಸ್ಎಸ್ಆರ್ | 8 | $12\frac{1}{8}$ | $6\frac{1}{2}$ |
| ಫಿನ್‌ಲೆಂಡ್ | $7\frac{3}{8}$ | $11\frac{3}{4}$ | $5\frac{7}{8}$ |
| ಹಂಗೆರಿ | 8 | $12\frac{1}{8}$ | $6\frac{1}{2}$ |
| ಭಾರತ | $8\frac{1}{8}$ | $12\frac{1}{4}$ | $6\frac{3}{4}$ |
| ಇಟಲಿ | $7\frac{1}{2}$ | $11\frac{3}{4}$ | 6 |
| ದಕ್ಷಿಣ ಕೊರಿಯ | $7\frac{3}{4}$ | 12 | $6\frac{3}{8}$ |
| ಮಲೇಸಿಯ | $7\frac{5}{8}$ | $11\frac{7}{8}$ | $6\frac{1}{4}$ |
| ದಕ್ಷಿಣ ಆಫ್ರಿಕಾ | 8 | $12\frac{1}{8}$ | $6\frac{1}{2}$ |
| ಸ್ಪೇನ್ | $7\frac{1}{8}$ | $12\frac{1}{8}$ | $6\frac{1}{2}$ |
| ಸ್ವಿಟ್ಜರ್‌ಲೆಂಡ್ | $7\frac{1}{4}$ | $11\frac{1}{2}$ | $5\frac{3}{4}$ |
| ಯುನೈಟೆಡ್ ಅರಬ್ ಎಮಿರೇಟ್ಸ್ | 8 | $12\frac{1}{8}$ | $6\frac{1}{2}$ |
| ಅಮೆರಿಕಾ ಸಂಯುಕ್ತ ಸಂಸ್ಥಾನ | $7\frac{1}{4}$ | $11\frac{1}{2}$ | $5\frac{3}{4}$ |
| ಯುಎಸ್ಎಸ್ಆರ್ | $7\frac{5}{8}$ | $11\frac{7}{8}$ | $6\frac{1}{8}$ |

ಲಿಬರ್ ಮತ್ತು ಭಾಗಾಂಶ ಇವೆರಡರ ಒಟ್ಟು ಲಬ್ಧವು ರಫ್ತುದಾರನಿಗೆ ವಿಧಿಸಿದ ಪರಿಣಾಮಕ ಬಡ್ಡಿ ದರಕ್ಕೆ ಸಮನಾಗಿದೆ, ಮತ್ತು ವಟ್ಟ ಮತ್ತು ಹುಟ್ಟುವಳಿಯ ನಡುವಣ ಅರ್ಧವಾರ್ಷಿಕ ಚಕ್ರೀಕರಣದ ಆಧಾರದ ಮೇಲೆ ಅನುಪಾತೀಯ ದರಗಳಲ್ಲಿ ಇದನ್ನು ಅಭಿವ್ಯಕ್ತಿಸಲಾಗುತ್ತದೆ.

ಅನುಪಾಶ್ರಯಣ ಹುಟ್ಟುವಳಿಯನ್ನು ಲೆಕ್ಕಹಾಕುವ ಉದ್ದೇಶಕ್ಕಾಗಿ ವಟ್ಟ ಹುಟ್ಟುವಳಿಯ ದರವನ್ನು ಇಂಡೆಲೆಕ್‌ನ ಅನುಪಾಶ್ರಯಣೀಕರಣ ವಟ್ಟ ದರಗಳು ಎಂಬ ಇಂಡೆಲೆಕ್ ಪ್ರಕಟಣೆಯಲ್ಲಿ ಸೂಚಿಸಿರುವಂತೆ ನೇರ ವಟ್ಟದರವನ್ನಾಗಿ ಪರಿವರ್ತಿಸಲಾಗುವುದು. (ಇದರೊಟ್ಟಿಗಿನ ಕೋಷ್ಟಕವನ್ನು ನೋಡಿ.)

ಇಲ್ಲಿ ಕಾಣಬಹುದಾದಂತೆ ಅನುಪಾಶ್ರಯಣೀಕರಣ ವಹಿವಾಟೊಂದಕ್ಕೆ ಅನ್ವಯವಾಗುವ ಬಡ್ಡಿಯನ್ನು ಮುಂಗಡವಾಗಿ ಕಳೆಯಲಾಗುತ್ತದೆ. ಇದು ಬಡ್ಡಿಯನ್ನು ಸಾಮಾನ್ಯವಾಗಿ ಚುಕ್ತಾ ಮಾಡುವ ಬಡ್ಡಿಯ ಇತ್ಯರ್ಥದ ಸಾಂಪ್ರದಾಯಿಕ ವ್ಯಾಪಾರೀ ಧನ ಪೋಷಣೆಗಿಂತ ಭಿನ್ನವಾಗಿದೆ. ಒಂದು ಅನುಪಾಶ್ರಯಣ ವ್ಯವಹಾರಕ್ಕೆ ಅನ್ವಯವಾಗುವ ಬಡ್ಡಿಯ ದರವನ್ನು ಮೊದಲೇ ಕಡಮೆ ಮಾಡಲಾಗುತ್ತದೆ. (ಪೂರ್ವಭಾವಿಯಾಗಿ ವ್ಯವಕಲಿಸಲಾಗುತ್ತದೆ)

ಇಲ್ಲಿ ತೋರಿಸಿರುವಂತೆ ಸಾಂಪ್ರದಾಯಿಕ ವ್ಯಾಪಾರೀ ಧನ ಪೋಷಣೆಯಲ್ಲಿಯ ಬಡ್ಡಿ ಚುಕ್ತಾ ವಿಧಾನಕ್ಕಿಂತ ಇದು ಭಿನ್ನವಾಗಿದೆ. ಸಾಂಪ್ರದಾಯಿಕ ವ್ಯಾಪಾರೀ ಧನಪೋಷಣೆಯಲ್ಲಿ ಬಡ್ಡಿ ಸಾಮಾನ್ಯವಾಗಿ ಬಾಕಿಯ ರೂಪದಲ್ಲಿ ದೇಯವಾಗಿರುತ್ತದೆ. (ಬಾಕಿಯಾದ ಮೇಲೆ ದೇಯವಾಗುತ್ತದೆ) ರಫ್ತುದಾರ ತನ್ನ ನಗದು ಬೆಲೆಯನ್ನು ಅನುಪಾಶ್ರಯಣದ ವೆಚ್ಚಕ್ಕೆ ಸಮನಾಗಿ ಹೆಚ್ಚಿಸಲು ಪ್ರಯತ್ನಿಸಬೇಕು. ಅಥವಾ ವಟ್ಟ ಹುಟ್ಟುವಳಿ ದರಕ್ಕೆ ಸಮನಾಗಿ ಖರೀದಿದಾರನ ಬಡ್ಡಿ ದರದ ಬಗ್ಗೆ ಚೌಕಾಶಿ ಮಾಡಲು ಪ್ರಯತ್ನಿಸಬೇಕು. ತನ್ಮೂಲಕ ವಾಣಿಜ್ಯಕ ಒಪ್ಪಂದದ ಮೇಲಣ ಲಾಭದ ಯಾವುದೇ ಇಳಿತಾಯವನ್ನು (ಕಡಿತವನ್ನು) ನಿವಾರಿಸಬಹುದು. ಖರೀದಿದಾರನ ಬಡ್ಡಿ ಮತ್ತು ಅನುಪಾಶ್ರಯಣದ ವೆಚ್ಚಗಳ ನಡುವಣ ಯಾವುದೇ ವ್ಯತ್ಯಯವನ್ನು ತುಂಬಿಕೊಳ್ಳಲು ಅನುವಾಗುವಂತೆ ನೀಡಿಕೆ ಬೆಲೆಯ ವಿಸ್ತೃತ ಲೆಕ್ಕಾಚಾರಗಳಿಂದ ಬೆಲೆಯ ನಿಗದಿಯಲ್ಲಿ ರಫ್ತುದಾರನಿಗೆ ನೆರವು ನೀಡಲು ಇಂಡೆಲೆಕ್ ಸಂಸ್ಥೆಗೆ ಯಾವಾಗಲೂ ಸಂತೋಷವೇ.

ಕೃಪಾದಿನಗಳು ಮತ್ತು ಒಂದು ಬದ್ಧತೆಗಾಗಿ ಪಾವತಿ ಶುಲ್ಕ (ಕಮಿಟ್‌ಮೆಂಟ್ ಫೀ) ಇವು ಇತರ ಪ್ರಚಾರಗಳು. ಇವು ಕೂಡ ಲೆಕ್ಕಾಚಾರದಲ್ಲಿ ಸೇರುತ್ತವೆ. ಆಮದು ಮಾಡಿಕೊಳ್ಳುವ ದೇಶಗಳಲ್ಲಿ ಪತ್ರಗಳನ್ನು ಅಥವಾ ಹುಂಡಿಗಳನ್ನು ವಸೂಲಿ ಮಾಡುವಾಗ ಸಾಮಾನ್ಯವಾಗಿ ಅನುಭವಿಸಬೇಕಾಗಿ ಬರುವ ವಿಳಂಬಗಳಿಂದಾಗುವ ನಷ್ಟದ ಪೂರಣಕ್ಕೆ ಇಂಡೆಲೆಕ್ ವಿಧಿಸುವ ವಟಾವಣೆಯ ದಿನಗಳ ಹೆಚ್ಚುವರಿ ಸಂಖ್ಯೆಗೆ ಅನುಗುಣವಾಗಿ ಕೃಪಾದಿನಗಳು ಇರುತ್ತವೆ. ಸಾಮಾನ್ಯವಾಗಿ ಕೃಪಾದಿನಗಳು ಮೂರರಿಂದ ಏಳುದಿನಗಳವರೆಗೂ ಇರುತ್ತವೆ. ಅತೃಪ್ತಿಕರ ಪಾವತಿ ದಾಖಲೆಯುಳ್ಳ ದೇಶಗಳಲ್ಲಿ ಇದು ಮೂವತ್ತು ಅಥವಾ ಇನ್ನೂ ಹೆಚ್ಚು ದಿನಗಳು ಇರಬಹುದು. ಮುಂದೆ ಬಟವಾಡೆ ಮಾಡುವುದಕ್ಕಾಗಿ ಸ್ಥಿರ ಪರತ್ತುಗಳಲ್ಲಿ ವ್ಯಾಪಾರ ಪತ್ರಗಳನ್ನು ಕೊಳ್ಳಲು ನಿರ್ದಿಷ್ಟ ವಾಗ್ದಾನ ಮಾಡುವುದಕ್ಕಾಗಿ (ಫರ್ಮ್ ಅಂಡರ್‌ಟೇಕಿಂಗ್) ಅನುಪಾಶ್ರಯಣಕಾರನಿಗೆ ಬದ್ಧತಾ ಶುಲ್ಕ ದೇಯವಾಗುತ್ತದೆ. ಸರಕುಗಳ ತಯಾರಿಕೆ ಹಾಗೂ ಹಡಗು ರವಾನೆಯ ಸಮಯದಲ್ಲಿ ಬಡ್ಡಿ ದರಗಳ ಏರು ಪ್ರವೃತ್ತಿಯಿಂದಾಗಿ ಧನಪೋಷಣೆಯ ವೆಚ್ಚಗಳ ಏರಿಕೆಯ ವಿರುದ್ಧ ರಫ್ತುದಾರನಿಗೆ ರಕ್ಷಣೆ ದೊರೆಯುತ್ತದೆ. ಅನುಪಾಶ್ರಯಣೀಕರಣದ ಕರಾರು ಮುಗಿದ ದಿನಾಂಕದಿಂದ ಆರಂಭವಾಗಿ ಅನುಪಾಶ್ರಯಣೀಕರಣ ಹುಟ್ಟುವಳಿಯ ಪಾವತಿ ದಿನಾಂಕದವರೆಗೆ ಸಾಧಾರಣವಾಗಿ ಮಾಹೆಯಾನ ಶೇ. 0.01ರಂತೆ (ಸಾಲಿಯಾನ ಶೇ. 1.2) ದಾಮಾಷಾ ಆಧಾರದ ಮೇಲೆ ಲೆಕ್ಕಹಾಕಲಾದ ಬದ್ಧತಾ ಶುಲ್ಕಕ್ಕೆ ಪ್ರತಿಯಾಗಿ ಒಂದು ವರ್ಷದವರೆಗಿನ ಅವಧಿಯವರೆಗೆ ದೃಢ ಬದ್ಧತೆಗಳು ಸಾಮಾನ್ಯವಾಗಿ ದೊರೆಯುತ್ತವೆ. ಅನುಪಾಶ್ರಯಣ ಸೌಲಭ್ಯವನ್ನು ರಫ್ತುದಾರ ಯಾವುದೇ ಕಾರಣಕ್ಕಾಗಿ ಬಳಸಿಕೊಳ್ಳಲು ಸಾಧ್ಯವಾಗದಿದ್ದಾಗ್ಯೂ ಬದ್ಧತಾ ಶುಲ್ಕವಂತೂ ದೇಯವಾಗುವುದೆಂಬುದನ್ನು ಗಮನಿಸಬೇಕು.

### ರಫ್ತುದಾರನ ಹೊಣೆಗಾರಿಕೆ

ಅನುಪಾಶ್ರಯಣ ಕರಾರಿನಂತೆ, ಕರಾರಿನಲ್ಲಿ ನಿರ್ದಿಷ್ಟಪಡಿಸಲಾದ (ವಚನಪತ್ರಗಳು, ವಿನಿಮಯ ಹುಂಡಿಗಳು, ಖಾತರಿ ಪತ್ರ

ಇತ್ಯಾದಿ) ದಸ್ತೈವಜುಗಳನ್ನು ಅನುಪಾಶ್ರಯಣಕಾರನಿಗೆ ಒದಗಿಸುವುದಕ್ಕೆ ಮತ್ತು ಈ ದಸ್ತೈವಜುಗಳ ಸಾಚಾತನ—ಇಷ್ಟಕ್ಕೆ ಪೂರೈಕೆದಾರನ ಹೊಣೆ ಸೀಮಿತವಾಗಿರುತ್ತದೆ. ವಾಣಿಜ್ಯ ಕರಾರಿಗಿಂತ ರಫ್ತುದಾರ ತನ್ನ ಬಾಧ್ಯತೆಗಳನ್ನು ಯಥಾವಿಧಿಯಾಗಿ ಪೂರೈಸಿರುವುದಕ್ಕೆ ಅವಲಂಭಿಸಿದ ಸಪ್ರಮಾಣದ ಹಕ್ಕನ್ನು ವ್ಯಾಪಾರ ಋಣಗಳು ಆಧರಿಸಬೇಕು. ಇದು ಸಹಜವೇ.

### ಉಪಸಂಹಾರ

ಹಲವು ವರ್ಷಗಳ ಹಿಂದೆ ಮಾಡಲಾದ ವಹಿವಾಟುಗಳಿಗಾಗಿ ಸರ್ಕಾರಿ ಸಂಚಾಲಿತ ರಫ್ತು ಉದರಿ ಯೋಜನೆಗಳ ಬೆಂಬಲವುಳ್ಳ ರಫ್ತು ಧನಪೋಷಣೆ ಕರಾರುಗಳ ಆಡಿಯಲ್ಲಿ ತಮ್ಮ ದೀರ್ಘಾವಧಿ ಸಾಲನ್ನು ಪಾವತಿ ಮಾಡಬೇಕೆಂಬ ಬ್ಯಾಂಕುಗಳ ಅನಿರೀಕ್ಷಿತ ಬೇಡಿಕೆಯನ್ನು ಎದುರಿಸುವ ಸ್ಥಿತಿಗೆ ಕೈಗಾರಿಕಾ ರಾಷ್ಟ್ರಗಳ ಪೂರೈಕೆದಾರರನ್ನು ಅಂತರರಾಷ್ಟ್ರೀಯ ಋಣ ಬಿಕ್ಕಟ್ಟು ತಳ್ಳಿದೆ. ಬಂಡವಾಳ ಸರಕುಗಳಿಗೆ ಸಂಬಂಧಿಸಿದಂತೆ ರಫ್ತು ಮಾರುಕಟ್ಟೆಗಳು ಇಳಿಮುಖವಾಗಿರುವ ಸಮಯದಲ್ಲಿ ಮತ್ತು ಪೂರೈಕೆದಾರರೊಳಗೆ ತೀವ್ರ ಪೈಪೋಟಿ ಇರುವ ಸಮಯದಲ್ಲಿ ಹೀಗಾಗಿದೆ ಮತ್ತು ಸಾಂಪ್ರದಾಯಿಕ ವಿಧಾನದಿಂದಾಚೆ ವ್ಯಾಪಾರ ಹಣಕಾಸನ್ನು ಒದಗಿಸಲು ಮತ್ತು ಬಿಕ್ಕಟ್ಟಿನ ಸ್ಥಿತಿಯಿಂದ ಹೊರಬರುವಂತೆ ರಫ್ತು ಕೈಗಾರಿಕೆಗೆ ಸಹಾಯ ದೊರಕುವಂತೆ ಸಾಲ ನೀಡಿಕೆದಾರರ ಉತ್ಸಾಹ ಇದರಿಂದಾಗಿ ಕುಗ್ಗಿದೆ.

ಅನುಪಾಶ್ರಯಣೀಕರಣ ಈ ಎಲ್ಲ ಸಮಸ್ಯೆಗಳಿಗೂ ಪರಿಹಾರವಾಗದೆ ಇರಬಹುದು. ಆದರೆ ಇದು ಮಾರಾಟಸಾಧನವೆಂಬುದನ್ನು ಮತ್ತು ಧನಪೋಷಣೆಯ ವ್ಯಾಪಾರಕ್ಕೆ ಒಂದು ಆಕರ್ಷಕ ಪರ್ಯಾಯವೆಂಬುದನ್ನು, ಅನುಪಾಶ್ರಯಣೀಕರಣದ ಅನುಕೂಲಗಳನ್ನು, ಹೆಚ್ಚು ಹೆಚ್ಚು ರಫ್ತುದಾರರು ಮನಗಾಣುತ್ತಿದ್ದಾರೆ.

---

**ಅನುವಾದಕರು**

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ, ಅಧ್ಯಾಪಕ, ಡಿ. ಬನುಮಯ್ಯ ಕಾಲೇಜು, ಮೈಸೂರು

ಕೆ. ಎಸ್. ನರಸಿಂಹಮೂರ್ತಿ, ಅಧಿಕಾರಿ (ಕಾನೂನು ವಿಭಾಗ), ಇಂಡಿಯನ್ ಓವರ್ಸೀಸ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಬೆಂಗಳೂರು ೫೬೦ ೦೦೨

ಎಸ್. ಕೃಷ್ಣ, ಬೋಧಕರು, ಸಿಬ್ಬಂದಿ ತರಬೇತಿ ಕೇಂದ್ರ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮೈಸೂರು ೫೭೦ ೦೦೧

ಕೆ. ಜನಾರ್ದನ ತುಂಗ, ಕಾರ್ಯದರ್ಶಿ, ಬರೋಡ ಬ್ಯಾಂಕ್ ಕನ್ನಡ ಸಂಘ, ಬೆಂಗಳೂರು ೫೬೦೦೦೯

ಚಿ. ರಾ. ವೇಣುಗೋಪಾಲ, ಕಾರ್ಯದರ್ಶಿ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ೫೭೦೦೦೧

ಟಿ. ಕೆ. ರಂಗನಾಥ್, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಳಗಾಂವಿ ೫೯೦೦೦೧

ಬಿ. ಎಸ್. ಭಾಸ್ಕರಶರ್ಮ, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಕೋಲಾರ ೫೬೩೧೦೧

ಪು. ರಾ. ಮುರಳೀಧರ, ಕಾರ್ಯದರ್ಶಿ, ಕೆನರಾ ಬ್ಯಾಂಕ್ ಕನ್ನಡ ಸಂಘ, ಬೆಂಗಳೂರು ೫೬೦೦೦೨

ಬಿ. ಎಸ್. ಚಂದ್ರಶೇಖರ್, ಅಧ್ಯಕ್ಷ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ, ಬೆಂಗಳೂರು ೫೬೦೦೦೨

ಶಾ. ಅಚ್ಚಣ್ಣ, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಬೆಂಗಳೂರು ೫೬೦೦೧೮



• • •

## ಕಾಂತೀಯ ಮಸಿ ಚೆಕ್ಕು

ಭಾರತೀಯ ಸ್ಟೇಟ್ ಬ್ಯಾಂಕು ತನ್ನ ಗ್ರಾಹಕರಿಗೆ ಕಾಂತೀಯ ಮಸಿ ಸಂಕೇತಯುಕ್ತ ಚೆಕ್ಕುಗಳನ್ನು ನೀಡಲಾರಂಭಿಸಿದೆ. ಇನ್ನು ಸುಮಾರು 6 ತಿಂಗಳುಗಳೊಳಗೆ ಮುಂಬೈ, ಕಲ್ಕತ್ತ, ದೆಹಲಿ ಮತ್ತು ಮದ್ರಾಸ್ ಶಾಖೆಗಳಲ್ಲಿ ಚಲಾವಣೆಗೆ ಬರುವ ಚೆಕ್ಕುಗಳೆಲ್ಲ ಈ ಬಗೆಯವಾಗಿರುತ್ತವೆ. ಚೆಕ್ಕುಗಳನ್ನು ಯಂತ್ರಗಳ ಮೂಲಕ ನಿರ್ವಹಿಸುವುದು ಆಗ ಆರಂಭತ್ತದೆ. ಅದುವರೆಗೂ ಸಾಮಾನ್ಯ ಚೆಕ್ಕುಗಳಂತೆಯೇ ಅವುಗಳ ನಿರ್ವಹಣೆ ಮುಂದುವರಿಯುತ್ತದೆ. ಯಂತ್ರ ಸಹಾಯದಿಂದ ಚೆಕ್ಕುಗಳ ನಿರ್ವಹಣೆ ಆರಂಭವಾದೊಡನೆ ಈ ನಗರಗಳಲ್ಲಿ ಸ್ಥಳೀಯ ಚೆಕ್ಕುಗಳ ತೀರುವೆ ಒಂದೇ ದಿನದಲ್ಲಿ ಸಾಧ್ಯವಾದೀತು. ಈ ಪ್ರಮುಖ ನಗರಗಳ ನಡುವಣ ಚೆಕ್ಕುಗಳ ತೀರುವೆಯ ಕಾಲವನ್ನು ನಾಲ್ಕು ದಿನಗಳಿಗೆ ಇಳಿಸಲೂ ಆದೀತು. ಕ್ರಮೇಣ ಈ ಸೌಲಭ್ಯವನ್ನು ಇತರ ಕೇಂದ್ರಗಳಿಗೂ ವಿಸ್ತರಿಸಲಾಗುತ್ತದೆ. ಪ್ರಯಾಣಿಕರ ಚೆಕ್ಕುಗಳು ಡಿವಿಡೆಂಟ್ ಮತ್ತು ಬಡ್ಡಿ ಪಾವತಿಗೂ ಈ ಸೌಲಭ್ಯ ನೀಡಲಾಗುತ್ತದೆ.

# ಬಾದಾಮಿಯ 'ಬ್ಯಾಂಕಿಂಗ್ ಕಮ್ಮಟ': ಒಂದು ವರದಿ

**ಬಿ. ಎಸ್. ಚಂದ್ರಶೇಖರ್**, ಕಮ್ಮಟ ಕಾರ್ಯದರ್ಶಿ, ಬಾದಾಮಿ ಕಮ್ಮಟ

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ ಮತ್ತು ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಹಯೋಗದಲ್ಲಿ 30-9-84ರಿಂದ 5-10-84ರ ವರೆಗೆ 6 ದಿನಗಳ ಕಾರ್ಯಶಿಬಿರವೊಂದನ್ನು (ಕಮ್ಮಟ) ಏರ್ಪಡಿಸಲಾಗಿತ್ತು. ಹಣ ಮತ್ತು ಬ್ಯಾಂಕಿಂಗ್ ಕುರಿತು ಕನ್ನಡದಲ್ಲಿ ಪ್ರಬಂಧ ರಚನೆ, ಬ್ಯಾಂಕುಗಳಲ್ಲಿ ಉಪಯೋಗಿಸುವ ನಮೂನೆಗಳ ಭಾಷಾಂತರ ಹಾಗೂ ಬ್ಯಾಂಕಿಂಗ್ ಕುರಿತು ಇಂಗ್ಲಿಷಿನಲ್ಲಿರುವ ಪ್ರೌಢಲೇಖನಗಳ ಕನ್ನಡ ಭಾಷಾಂತರ, ಆಧುನಿಕ ಬ್ಯಾಂಕಿಂಗ್ ಪರಿಕಲ್ಪನೆಗಳನ್ನು ಕನ್ನಡದಲ್ಲಿ ವಿವರಿಸುವುದು, ಪಾರಿಭಾಷಿಕ ಶಬ್ದಗಳ ಸೃಷ್ಟಿ—ಇವು ಕಮ್ಮಟದಲ್ಲಿ ಕೈಗೆತ್ತಿಕೊಂಡ ಕಾರ್ಯಗಳು.

ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಬ್ಯಾಂಕ್, ಭೂ ಅಭಿವೃದ್ಧಿ ಬ್ಯಾಂಕ್, ಪಂಜಾಬ್ ನ್ಯಾಷನಲ್ ಬ್ಯಾಂಕ್, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಕೆನರಾ ಬ್ಯಾಂಕ್, ಬ್ಯಾಂಕ್ ಆಫ್ ಬರೋಡ—ಇವುಗಳನ್ನು ಪ್ರತಿನಿಧಿಸಿ ಬಂದ 24 ಉದ್ಯೋಗಿಗಳು ಮತ್ತು ಅಧಿಕಾರಿಗಳಲ್ಲದೆ, ಪುರಾತತ್ವ ಸಂಶೋಧನಾಲಯದ ಉದ್ಯೋಗಿಯೊಬ್ಬರು ಮತ್ತು ಮೂವರು ವಾಣಿಜ್ಯ ಕಾಲೇಜು ಉಪನ್ಯಾಸಕರು (ಒಟ್ಟು 28 ಅಭ್ಯರ್ಥಿಗಳು)' ಈ ಕಮ್ಮಟದಲ್ಲಿ ಭಾಗವಹಿಸಿದ್ದರು. ಪ್ರೊ. ಎಚ್ಚೆಸ್ಕೆಯವರು ಕಮ್ಮಟದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪ್ರತಿನಿಧಿಯಾಗಿ ಅದರ ಸಹಾಯಕ ನಿರ್ದೇಶಕ ಶ್ರೀ ಕಾ. ತ. ಚಿಕ್ಕಣ್ಣ ಅವರು ಕಮ್ಮಟದ ವ್ಯವಸ್ಥಾಪನ ಹಾಗೂ ನಿರ್ದೇಶನಗಳಲ್ಲಿ ಪಾಲ್ಗೊಂಡರು.

### ಉದ್ಘಾಟನೆ

ಸೆಪ್ಟೆಂಬರ್ 30ರಂದು ಬೆಳಗ್ಗೆ 10 ಗಂಟೆಗೆ ಬಾದಾಮಿಯ ವೀರ ಪುಲಿಕೇಶಿ ಹಿರಿಯ ಕಾಲೇಜಿನ ಆವರಣದಲ್ಲಿ ಶ್ರೀ ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ಮಾಜಿ ಶಾಸಕ ಬಿ. ಎಂ. ಹೊರಕೇರಿಯವರಿಂದ ಕಮ್ಮಟದ ಉದ್ಘಾಟನೆ ನಡೆಯಿತು. ನಿರ್ದೇಶಕರಾದ ಪ್ರೊ. ಎಚ್ಚೆಸ್ಕೆಯವರು ಕಮ್ಮಟಗಳು ನಡೆದು ಬಂದ ದಾರಿಯನ್ನೂ, ಕಮ್ಮಟ ಚಳವಳಿಯ ಬಹುಮುಖ ಉಪಯೋಗವನ್ನೂ ಸಭೆಗೆ ಮನದಟ್ಟುಮಾಡಿಕೊಟ್ಟರು. ಶ್ರೀ ಕಾ. ತ. ಚಿಕ್ಕಣ್ಣ ಅವರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಚಟುವಟಿಕೆಗಳ ಪರಿಚಯ ಮಾಡಿಕೊಟ್ಟು, ಕಮ್ಮಟಕ್ಕೆ ಯಶ ಕೋರಿ ವಂದನೆ ಸಲ್ಲಿಸಿದರು

### ಕಲಾಪಗಳು

ಈ ಕಮ್ಮಟದಲ್ಲಿ ಒಟ್ಟು 19 ಪ್ರಬಂಧಗಳು, 1 ಉಪನ್ಯಾಸ, 5 ನಮೂನೆಗಳು ಮತ್ತು 1 ಲೇಖನದ ಭಾಷಾಂತರ ನಡೆಯಿತು.

ಪ್ರಬಂಧಗಳನ್ನು ಕುರಿತ ಚರ್ಚೆ ವ್ಯವಸ್ಥಿತವಾದ ರೀತಿಯಲ್ಲಿ ನಡೆಯುತ್ತಿತ್ತು. ಪ್ರಬಂಧ ರಚಿಸಿದವರು ಅದನ್ನು ಓದಿದ ಅನಂತರ ಪ್ರಧಾನ ವಿಮರ್ಶಕರಾಗಿ ಕಮ್ಮಟಿಗರಲ್ಲೊಬ್ಬರು ವಸ್ತು, ವಿಷಯ, ಭಾಷೆ, ಶೈಲಿ, ನಿರೂಪಣೆ ಮುಂತಾದ ವಿವಿಧ ದೃಷ್ಟಿಗಳಿಂದ ಅದನ್ನು ವಿಮರ್ಶಿಸುವುದು, ಅನಂತರ ಇತರರು ಪ್ರಬಂಧವನ್ನು ಕುರಿತ ತಮ್ಮ ಅನಿಸಿಕೆಗಳನ್ನೂ ಸಲಹೆಗಳನ್ನೂ ಮುಂದಿಡುವುದು. ಪ್ರಬಂಧಕಾರರು ತಮ್ಮ ಪ್ರತಿಕ್ರಿಯೆಯನ್ನು ಸೂಚಿಸುವುದು ಮತ್ತು ಇವೆಲ್ಲವನ್ನೂ ಗಮನಿಸಿ ನಿರ್ದೇಶಕರು ಪ್ರಬಂಧವನ್ನು ಉತ್ತಮಪಡಿಸಲು ತಮ್ಮ ಸಲಹೆಗಳನ್ನು ನೀಡುವುದು. ಈ ಚರ್ಚೆಯ ಆಧಾರದ ಮೇಲೆ ತಮ್ಮ ಪ್ರಬಂಧವನ್ನು ಪುನರ್ರಚಿಸಬೇಕಾದ್ದು ಪ್ರಬಂಧಕಾರರ ಹೊಣೆ.

ಭಾಷಾಂತರಕಾರ್ಯವೂ ಹೀಗೆ : ಪೂರ್ವಭಾವಿಯಾಗಿ ನಿಗದಿಯಾದಂತೆ ನಮೂನೆಯೊಂದನ್ನು ಅಥವಾ ಲೇಖನದ ಭಾಗವೊಂದನ್ನು ಕಮ್ಮಟಿಗರಲ್ಲೊಬ್ಬರು ಭಾಷಾಂತರಿಸಿ ತಂದಿರುತ್ತಾರೆ, ಮೂಲದ ಒಂದು ವಾಕ್ಯವನ್ನು ಒಬ್ಬರು ಓದಿದ ಮೇಲೆ ಭಾಷಾಂತರಕಾರರು ತಾವು ಭಾಷಾಂತರ ಮಾಡಿದುದನ್ನು ಓದುವರು. ಆಮೇಲೆ ಅದನ್ನು ಇತರರು ಪರಿಶೀಲಿಸಿ ತಮ್ಮ ಅಭಿಪ್ರಾಯ ನೀಡುವರು. ಪಾರಿಭಾಷಿಕ ಶಬ್ದಗಳನ್ನು ಕುರಿತ ಚರ್ಚೆ ನಡೆದು ಭಾಷಾಂತರದ ತಿದ್ದುಪಡಿಯಾಗುವುದು. ಹೀಗೆ ಭಾಷಾಂತರವಾದ ಲೇಖನ ಭಾಗದ ಅಥವಾ ನಮೂನೆಯ ಉತ್ತಮ ಪ್ರತಿ ಸಿದ್ಧವಾಗುವುದು.

ಪ್ರಬಂಧ, ಭಾಷಾಂತರಗಳಲ್ಲದೆ ಬ್ಯಾಂಕಿಂಗ್ ವಿಷಯವೊಂದನ್ನು ಕುರಿತ ಉಪನ್ಯಾಸವೊಂದನ್ನು ಪ್ರಯೋಗಾರ್ಥವಾಗಿ ನಡೆಸಿ ಅದನ್ನು ಕುರಿತು ಚರ್ಚಿಸಲಾಯಿತು.

ಕಮ್ಮಟಿಗರು ಪ್ರದರ್ಶಿಸಿದ ಸ್ವಯಂ ಶಿಸ್ತು ಉಲ್ಲೇಖಾರ್ಹ. ಯಾವುದೇ ರೀತಿಯ ಬಾಹ್ಯ ನಿಯಂತ್ರಣಗಳಿಲ್ಲದೆ, ಅಧಿಕಾರ ಚಲಾವಣೆಯಿಲ್ಲದೆ ಕಮ್ಮಟದ ಎಲ್ಲ ಕಲಾಪಗಳೂ ಸುಗಮವಾಗಿ ಸಂಪೂರ್ಣವಾಗಲು ಈ ಸ್ವಯಂ ಶಿಸ್ತು ನೆರವಾಯಿತು. ಬೆಳಗ್ಗೆ 9ರಿಂದ ಮಧ್ಯಾಹ್ನ 1ರವರೆಗೆ ಮತ್ತು ಮಧ್ಯಾಹ್ನ 2ರಿಂದ ಸಂಜೆ 6ರವರೆಗೆ—ಹೀಗೆ ಎರಡು ಅಧಿವೇಶನಗಳಲ್ಲಿ ಕಮ್ಮಟದ ಕಲಾಪಗಳು ನಡೆಯಬೇಕೆಂಬ ಯೋಚನೆಯಿದ್ದರೂ ವಾಸ್ತವವಾಗಿ ನಿಯಮಿತ ಕಾಲಕ್ಕಿಂತ ಒಂದೆರಡು ಗಂಟೆಗಳು ಮೊದಲೇ ಕಲಾಪಗಳು ಆರಂಭವಾಗುತ್ತಿದ್ದುವು.

### ಸ್ವಾಗತ ಸಮಿತಿಯ ಸಹಕಾರ

ಕಮ್ಮಟದ ಕಲಾಪಗಳು ಬಾದಾಮಿಯ ವೀರ ಪುಲಿಕೇಶಿ ಕಿರಿಯ ಕಾಲೇಜಿನ ಆವರಣದಲ್ಲಿ ನಡೆದುವು. ಈ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎಸ್. ಎಂ. ಯಲಿಗಾರರ ಅಧ್ಯಕ್ಷತೆಯ ಮತ್ತು ಸ್ಥಳೀಯ ಸ್ಟೇಟ್ ಬ್ಯಾಂಕ್ ಅಧಿಕಾರಿ ಶ್ರೀ ಎಸ್. ಎಂ. ಜಾಲವಾದಿ

ಯವರ ದಕ್ಷ ಕಾರ್ಯದರ್ಶಿತ್ವದ ಸ್ವಾಗತ ಸಮಿತಿಯೊಂದು ಕಮ್ಮಟಿಗರನ್ನು ಬಾದಾಮಿಗೆ ಸ್ವಾಗತಿಸಿ ಅವರಿಗೆ ಊಟ ವಸತಿಯೇ ಮುಂತಾದ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಟ್ಟು ಸಹಕರಿಸಿತು.

**ಇತರ ವಿಷಯಗಳು**

ಕಮ್ಮಟದ ಕಲಾಪಗಳು ತರಗತಿಯ ನಾಲ್ಕು ಗೋಡೆಗಳಿಗೆ ಸೀಮಿತವಾಗಿರಲಿಲ್ಲ.

2-10-84ರಂದು ಸಂಜೆ ಕಮ್ಮಟಿಗರಿಗಾಗಿ 'ರಸಪ್ರಶ್ನೆ' ಕಾರ್ಯಕ್ರಮವೊಂದನ್ನು ಏರ್ಪಡಿಸಲಾಗಿತ್ತು. ಅದೇ ಸಂಜೆ ಸರಳ ರೀತಿಯಲ್ಲಿ 'ಗಾಂಧಿ ಜಯಂತಿ' ಆಚರಿಸಲಾಯಿತು. ಪ್ರೊ. ಎಚ್ಚೆಸ್ಕೆ ಯವರು ಗಾಂಧೀಜಿಯವರ ಸರಳತೆ, ಹಾಸ್ಯಪ್ರಜ್ಞೆ, ಹಾಗೂ ಮಾನವಪ್ರೇಮ ಕುರಿತು ಮಾತನಾಡಿದರು. ಮನೋರಂಜನೆಯ ಕಾರ್ಯಕ್ರಮವೂ ಇತ್ತು.

ಕಮ್ಮಟದ ಸ್ಫೂರ್ತಿಯಿಂದ ಭಾರತೀಯ ಸ್ಟೇಟ್ ಬ್ಯಾಂಕಿನ ಬಾದಾಮಿ ಶಾಖೆಯಲ್ಲಿ ಪ್ರಾ. ಎಚ್ಚೆಸ್ಕೆಯವರಿಂದ 'ಕನ್ನಡ ಸಂಘ'ದ ಉದ್ಘಾಟನೆ ನಡೆಯಿತು.

ಇದು ಸಮನ್ವಯ ಸಮಿತಿ ಏರ್ಪಡಿಸಿದ 6ನೆಯ ಕಮ್ಮಟವಾದರೂ ಮೊಟ್ಟಮೊದಲ ಬಾರಿಗೆ ಕಮ್ಮಟಿಗರ ಬಹಿರಂಗ ಅಧಿವೇಶನವೊಂದು ನಡೆದು ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ಮುಂತಾದ ವಿಷಯಗಳನ್ನು ಕುರಿತಂತೆ ಹತ್ತು ನಿರ್ಣಯಗಳನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು.

3-10-84ರಂದು ಕಮ್ಮಟಿಗರಿಗಾಗಿ ಪಟ್ಟದಕಲ್ಲು, ಐಹೊಳೆ ಮುಂತಾದ ಸ್ಥಳಗಳಿಗೆ ಪ್ರವಾಸವೊಂದನ್ನು ಏರ್ಪಡಿಸಲಾಗಿತ್ತು.

**ಸಮಾರೋಪ**

ದಿನಾಂಕ 5-10-84ರಂದು ಬೆಳಗ್ಗೆ 11 ಗಂಟೆಗೆ ಬಾದಾಮಿಯ ವೀರಪುಲಿಕೇಶಿ ಕಾಲೇಜಿನ ಪ್ರಾಂಶುಪಾಲರಾದ ಡಾ. ಬಸವ ಪಟ್ಟದ ಅವರ ಅಧ್ಯಕ್ಷತೆಯಲ್ಲಿ ಕಮ್ಮಟದ ಸಮಾರೋಪ ಸಮಾರಂಭ ನಡೆಯಿತು. ಪ್ರಾರ್ಥನೆ, ಸ್ವಾಗತಗಳ ನಂತರ ಕಮ್ಮಟದಲ್ಲಿ ಮೊದಲ ಬಾರಿಗೆ ಭಾಗವಹಿಸಿದವರಲ್ಲಿ ಹಲವರು ತಮ್ಮ ಕಮ್ಮಟದ ಅನುಭವವನ್ನು ಸಭೆಗೆ ವಿವರಿಸಿದರು. ಕಮ್ಮಟದ ಯಶಸ್ಸಿಗೆ ಕಾರಣರಾದ ಸ್ಥಳೀಯ ಗಣ್ಯ ವ್ಯಕ್ತಿಗಳಿಗೆ ಹಾಗೂ ಸಂಸ್ಥೆಗಳಿಗೆ ನೆನಪು ಕಾಣಿಕೆ ನೀಡಲಾಯಿತು. ಬಾದಾಮಿಯ ವೀರಪುಲಿಕೇಶಿ ಕಿರಿಯ ಕಾಲೇಜಿನ ಪ್ರಾಂಶುಪಾಲ ಶ್ರೀ ಎಸ್. ಎಂ. ಯಲಿಗಾರ್‌ರವರು ಕಮ್ಮಟಿಗರಿಗೆ ಪ್ರಮಾಣ ಪತ್ರಗಳನ್ನು, ನೆನಪು ಕಾಣಿಕೆಗಳನ್ನು ವಿತರಿಸಿ, ಕಮ್ಮಟದ ಕಲಾಪಗಳು ಶಿಸ್ತಿನಿಂದ ನಡೆದುದನ್ನು ಮೆಚ್ಚಿದರು.

ಕಮ್ಮಟದ ನಿರ್ದೇಶಕರು ಮಾತನಾಡಿ ಕಮ್ಮಟದ ಯಶಸ್ಸಿಗೆ ಕಾರಣರಾದ ಸಂಸ್ಥೆಗಳಿಗೂ, ಸ್ವಾಗತ ಸಮಿತಿಯ ಸದಸ್ಯರಿಗೂ ಕೃತಜ್ಞತೆ ಸಲ್ಲಿಸಿ, ಯಾವುದೇ ರೀತಿಯಿಂದ ಉತ್ತಮ ಸ್ಥಿತಿಯಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ತಾನು ಸಮಾಜಕ್ಕೆ ಮಾಡಲೇಬೇಕಾದ ಕರ್ತವ್ಯ ಇರುತ್ತದೆ, ಅದನ್ನು ಮಾಡದಿದ್ದರೆ ಅಪರಾಧವಾಗುತ್ತದೆ—ಎಂಬ ತಮ್ಮ ದೃಷ್ಟಿಯನ್ನು ಸಭೆಯ ಮುಂದಿಟ್ಟು ಕನ್ನಡದ ಮೂಲಕ ಸಾಮಾನ್ಯರ ಸೇವೆಗೆ ಮುಂದಾಗಲು ಕರೆ ನೀಡಿದರು. ಡಾ॥ ಬಸವ ಪಟ್ಟದ ಅವರು ಸಮಾರೋಪ ಭಾಷಣ ಮಾಡುತ್ತಾ ಕಮ್ಮಟದಲ್ಲಿ ನಡೆದ ಕಲಾಪಗಳ ಮಹತ್ವವನ್ನು ಗುರುತಿಸಿ ಈ ಕೆಲಸ ಮುಂದುವರಿಯಲೆಂದು ಹಾರೈಸಿ, ಮತ್ತೊಮ್ಮೆ ಬಾದಾಮಿಯಲ್ಲಿ ಕಮ್ಮಟ ನಡೆಯಲಿ ಎಂದು ಆಶಿಸಿದರು.

ಬಾದಾಮಿಯ ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧಗಳ ಮತ್ತು ನೀಡಲಾದ ಉಪನ್ಯಾಸಗಳ ವಿಷಯಗಳು ಮತ್ತು ಪ್ರಬಂಧಕಾರರ ಹಾಗೂ ಉಪನ್ಯಾಸಕರ ಹೆಸರುಗಳು :

30-9-84
1 ಬ್ಯಾಂಕರ್ ಮತ್ತು ಗ್ರಾಹಕರ ಸಂಬಂಧ
—ಶ್ರೀ ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

1-10-84
2 ಗ್ರಾಮೀಣ ಶಾಖಾ ಸಿಬ್ಬಂದಿಗೆ ವಿಶೇಷ ತರಬೇತಿ ಅಗತ್ಯ
—ಬಿ. ಎಸ್. ಸಂಜೀವ

3 ಬ್ಯಾಂಕ್ ದಸ್ತಾವೇಜುಗಳ ಸರಳೀಕರಣ
—ಶಾಂತರಾಜು

4 ದಸ್ತಾವೇಜು ಉದರಿ ಪತ್ರಗಳ ಏಕರೂಪದ ಪದ್ಧತಿ ಮತ್ತು ಆಚರಣೆಗಳ ತಿದ್ದುಪಡಿ : ಕೆಲವು ವಿಚಾರಗಳು
—ಟಿ. ಕೆ. ರಂಗನಾಥ

5 ತಾಂತ್ರಿಕ ಪ್ರಗತಿ ಮತ್ತು ಬ್ಯಾಂಕುಗಳು : ಒಂದು ವಿಶ್ಲೇಷಣೆ.
—ಕೆ. ಎನ್. ಮಹಾಬಲ

2-10-84
6 ನಬಾರ್ಡ್‌ನ ಹೊಸ ಪಾತ್ರ
—ಶಾ. ಅಚ್ಚಣ್ಣ

7 ಬ್ಯಾಂಕುಗಳಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿ
—ಟಿ. ರಾ. ವೇಣುಗೋಪಾಲ

8 ಬ್ಯಾಂಕುಗಳಲ್ಲಿ ದೂರವ್ಯಾಪಿ ಯೋಜನೆ
—ಆರ್. ಜಯಕುಮಾರ್

9 ಬ್ಯಾಂಕುಗಳಲ್ಲಿ ನೇಮಕಾತಿ : ಕೆಲವು ವಿಚಾರಗಳು
—ಬೆಂ. ಶ್ರೀ. ರವೀಂದ್ರ

10 ಬ್ಯಾಂಕುಗಳಲ್ಲಿ ಲಾಭಪ್ರದತೆಯನ್ನು ಹೆಚ್ಚಿಸಬಹುದಾದ ಕೆಲವು ಕ್ಷೇತ್ರಗಳು
—ಟಿ. ಜಿ. ಭಗವತಿ

11 ಬ್ಯಾಂಕುಗಳಲ್ಲಿ ಮಾನವ ಶಕ್ತಿಯ ಆಯೋಜನೆ
—ಜನಾರ್ದನ ತುಂಗ

12 ಗ್ರಾಹಕ ಸೇವೆಯಲ್ಲಿ ಸಿಬ್ಬಂದಿಯ ಪಾತ್ರ
—ಪು. ರಾ. ಮುರಳೀಧರ

13 ಠೇವಣಿ ಸಂಗ್ರಹಣೆಗೆ ಮಾರಾಟಗಾರಿಕೆ ತಂತ್ರ
—ಎಚ್. ಎಸ್. ಮೋಹನ್

3-10-84
ಭಾಷಾಂತರ ಮತ್ತು ಪ್ರವಾಸ ಕಾರ್ಯಕ್ರಮ.

4-10-84 14 ಆಸ್ತಿ ಹೊಣೆ ತಃಖ್ತೆ : ಬ್ಯಾಂಕರನ ದೃಷ್ಟಿ
—ಬಿ. ಎಸ್. ಚಂದ್ರಶೇಖರ

15 ಬ್ಯಾಂಕಿಂಗ್ ಸಂಸ್ಥೆ: ಸಮಾಜದ ಆಕಾಂಕ್ಷೆಗಳು
—ಎಸ್. ಆರ್. ಕುಲಕರ್ಣಿ

16 ಉದರಿ ಪ್ರಾಧಿಕರಣ ಯೋಜನೆ
—ಪಿ. ಕೋದಂಡರಾಮ

17 ಗ್ರಾಮೀಣ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪಾತ್ರ
—ಜಿ. ಜಿ. ಗೌಡರ್

18 ಬ್ಯಾಂಕು ಮತ್ತು ಮಹಿಳೆ
—ಶ್ರೀರಾಮ ನಾಡಿಗೇರ

5-10-84 19 ಸಾಲಮೇಳಗಳು : ಹಣದ ಚೆಲ್ಲಾಟ
—ಶೃಂಗೇಶ್ವರ ಶರ್ಮ

20 ಬ್ಯಾಂಕುಗಳಲ್ಲಿ ರಹಸ್ಯ
—ಪಾ. ರಾಜಗೋಪಾಲ

20ನೆಯದನ್ನು ಉಳಿದು ಇತರೆಯವು ಪ್ರಬಂಧಗಳು. 20ನೆಯದು ಉಪನ್ಯಾಸ
ಇವುಗಳ ಜೊತೆಗೆ ಕೆಲವು ನಮೂನೆಗಳನ್ನೂ ಪ್ರಬಂಧಗಳನ್ನೂ ಅನುವಾದಿಸಲಾಯಿತು.

ಅಕ್ಟೋಬರ್ 2ರಂದು ಕಮ್ಮಟದ ಬಹಿರಂಗ ಅಧಿವೇಶನದಲ್ಲಿ ಸ್ವೀಕರಿಸಲಾದ ಗೊತ್ತುವಳಿಗಳು :

1 ಸಮನ್ವಯ ಸಮಿತಿಯು ವ್ಯವಸ್ಥೆ ಮಾಡಿದ ಆರನೆಯ ಬ್ಯಾಂಕಿಂಗ್ ಕಮ್ಮಟಕ್ಕೆ ಸಂಪೂರ್ಣ ಸಹಕಾರ ಮತ್ತು ಆರ್ಥಿಕ ನೆರವನ್ನು ನೀಡಿದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಕ್ಕೆ ಕಮ್ಮಟಿಗರ ಅಧಿವೇಶನ ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಸಮನ್ವಯ ಸಮಿತಿಯ ಚಟುವಟಿಕೆಗಳು ಮಾತ್ರವಲ್ಲದೆ, ಕರ್ನಾಟಕದ ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿವಂತೆ ಎಲ್ಲ ಬಗೆಯ ಕನ್ನಡಪರ ಚಟುವಟಿಕೆಗಳಿಗೂ ಇದಕ್ಕಿಂತ ಹೆಚ್ಚಿನ ಬೆಂಬಲ, ಪ್ರೋತ್ಸಾಹ, ನೆರವನ್ನು ಕರ್ನಾಟಕ ಸರ್ಕಾರವು ಸದಾ ನೀಡುವುದೆಂದು ಈ ಅಧಿವೇಶನವು ಆಶಿಸುತ್ತದೆ.

2 'ಕಮ್ಮಟವು ಯಶಸ್ವಿಯಾಗಿ ನಡೆಯುವಲ್ಲಿ ಸಹಕರಿಸಿದ ಸ್ವಾಗತ ಸಮಿತಿ, ಬಾದಾಮಿಯ ಬ್ಯಾಂಕ್ ಉದ್ಯೋಗಿಗಳು, ನಾಗರಿಕರು ಮತ್ತಿತರರಿಗೆ ಅಧಿವೇಶನವು ತನ್ನ ಕೃತಜ್ಞತೆ ಸಲ್ಲಿಸುತ್ತದೆ.'

3 'ಗ್ರಾಮೀಣ ಬ್ಯಾಂಕುಗಳೂ ಸೇರಿದಂತೆ ಕರ್ನಾಟಕದಲ್ಲಿರುವ ಎಲ್ಲ ವಾಣಿಜ್ಯ ಬ್ಯಾಂಕುಗಳ ಆಡಳಿತದ ವಿವಿಧ ಹಂತಗಳಲ್ಲಿ, ಅಂದರೆ ಪ್ರಾದೇಶಿಕ, ವಲಯ, ವಿಭಾಗೀಯ ಹಾಗೂ ಆಡಳಿತ ಕಛೇರಿಗಳಲ್ಲಿ ಬ್ಯಾಂಕ್ ವ್ಯವಸ್ಥಾಪನೆಗಳು ಕಡ್ಡಾಯವಾಗಿ (ಪ್ರತ್ಯೇಕ) ಕನ್ನಡ ವಿಭಾಗಗಳನ್ನು ತರೆದು ಅದರ ಮುಖ್ಯಸ್ಥರನ್ನಾಗಿ ಕನ್ನಡ ಭಾಷಾ ಅಧಿಕಾರಿಗಳನ್ನು ನೇಮಿಸಬೇಕೆಂದೂ, ಕನ್ನಡದಲ್ಲಿ ವ್ಯವಹರಿಸಲು ಅಗತ್ಯವಾದ ಕನ್ನಡ ಬೆರಳಚ್ಚು ಯಂತ್ರಗಳನ್ನು ಬ್ಯಾಂಕುಗಳು ತಮ್ಮ ಪ್ರತಿ ಶಾಖೆ/ಕಛೇರಿಗೂ ಒದಗಿಸಿ ಅಲ್ಲಿ ಕನ್ನಡ ಬೆರಳಚ್ಚುಗಾರರನ್ನು ನೇಮಕ ಮಾಡಿಕೊಳ್ಳುವಂತೆ ಬ್ಯಾಂಕ್ ಆಡಳಿತ ವರ್ಗಗಳ ಮೇಲೆ ಒತ್ತಡ ಹೇರಬೇಕೆಂದೂ ಕರ್ನಾಟಕ ಸರಕಾರವನ್ನು ಈ ಅಧಿವೇಶನವು ಒತ್ತಾಯಿಸುತ್ತದೆ.'

4 'ಕರ್ನಾಟಕದಲ್ಲಿನ ಬ್ಯಾಂಕ್ ನೇಮಕಾತಿಗೆ 'ಸ್ಥಳೀಯ ಭಾಷಾ ಜ್ಞಾನ \ ಅಪೇಕ್ಷಣೀಯ' ಎಂದು ಈಗಿರುವ ನಿಯಮದಂತೆ ಸ್ಥಳೀಯ ಭಾಷೆಯ ವ್ಯಾಖ್ಯೆಯಲ್ಲಿ ಕನ್ನಡೇತರ ಭಾಷೆಗಳನ್ನೂ ಸೇರಿಸಲಾಗಿದೆ. ಇದನ್ನು ತೀವ್ರವಾಗಿ ಪರಿಗಣಿಸಿದ ಅಧಿವೇಶನವು ಈಗಿನ ನಿಯಮ ಹಿಂತೆಗೆದುಕೊಂಡು ಪ್ರಾದೇಶಿಕ ಭಾಷೆಯಾದ 'ಕನ್ನಡ ಭಾಷಾಜ್ಞಾನ ಕಡ್ಡಾಯ' ಎಂದು ತತ್‌ಕ್ಷಣ ಹೊಸ ಆದೇಶ ಹೊರಡಿಸಬೇಕೆಂದು ಕರ್ನಾಟಕ ಸರ್ಕಾರವನ್ನು ಒತ್ತಾಯಿಸುತ್ತದೆ.'

5 'ಪ್ರಸ್ತುತ ಕರ್ನಾಟಕ ಲೋಕಸೇವಾ ಅಯೋಗವು ನಡೆಸುವ ಪರೀಕ್ಷೆಗಳಲ್ಲಿರುವಂತೆ ಬ್ಯಾಂಕುಗಳು ಕರ್ನಾಟಕ ರಾಜ್ಯದಲ್ಲಿ ನಡೆಸುವ ಎಲ್ಲ ನೇಮಕಾತಿ ಹಾಗೂ ಬಡ್ತಿ ಪರೀಕ್ಷೆಗಳಲ್ಲೂ ಅಭ್ಯರ್ಥಿಗಳಿಗೆ ಪ್ರಶ್ನೆಪತ್ರಿಕೆಗಳನ್ನು ಕನ್ನಡ ಮತ್ತು ಇಂಗ್ಲಿಷ್ ಈ ಎರಡೂ ಭಾಷೆಗಳಲ್ಲಿ ಒದಗಿಸಿ, ಎರಡರಲ್ಲಿ ಯಾವ ಭಾಷೆಯಲ್ಲಿ ಬೇಕಾದರೂ ಉತ್ತರಿಸಲು ಅವಕಾಶ ಮಾಡಿಕೊಡುವಂತೆ ಬ್ಯಾಂಕುಗಳ ವ್ಯವಸ್ಥಾಪಕ ವರ್ಗಗಳು ಮತ್ತು ನೇಮಕಾತಿ ಮಂಡಳಿಗಳ ಮೇಲೆ ತನ್ನ ಪ್ರಭಾವ ಬೀರಬೇಕೆಂದೂ ಕರ್ನಾಟಕ ಸರ್ಕಾರವನ್ನು ಈ ಕಮ್ಮಟಿಗರ ಅಧಿವೇಶನ ಪ್ರಾರ್ಥಿಸುತ್ತದೆ.'

6 'ಅಧಿಕೃತ ಭಾಷಾ ಅಧಿನಿಯಮದಲ್ಲಿ ಹೇಳಿರುವ ತ್ರಿಭಾಷಾ ಸೂತ್ರಕ್ಕನುಗುಣವಾಗಿ ಕರ್ನಾಟಕದಲ್ಲಿರುವ ಎಲ್ಲ ಬ್ಯಾಂಕ್ ಶಾಖೆಗಳಲ್ಲಿ ಹಾಗೂ ಆಡಳಿತ ಕಛೇರಿಗಳಲ್ಲಿರುವ ಎಲ್ಲ ನಾಮಫಲಕಗಳನ್ನು ಮತ್ತು ಮುಂಗಟ್ಟೆ ಫಲಕಗಳನ್ನು ಕನ್ನಡ ಭಾಷೆಯಲ್ಲಿ ಬರೆಸಿ ಪ್ರದರ್ಶಿಸುವುದನ್ನು ಕಡ್ಡಾಯಗೊಳಿಸುವ ಆದೇಶ ಹೊರಡಿಸಬೇಕೆಂದು ಈ ಕಮ್ಮಟಿಗರ ಅಧಿವೇಶನವು ಕರ್ನಾಟಕ ಸರ್ಕಾರವನ್ನು ಒತ್ತಾಯಿಸುತ್ತದೆ.'

7 'ಕರ್ನಾಟಕದಲ್ಲಿರುವ ಬ್ಯಾಂಕುಗಳಲ್ಲಿ ಕನ್ನಡದ ಬಳಕೆಯನ್ನು ಹೆಚ್ಚಿಸಲು ಸಹಾಯಕವಾಗುವಂತೆ ಬ್ಯಾಂಕು ಉದ್ಯೋಗಿಗಳಿಗೆ ಸೂಕ್ತವಾದ ಬ್ಯಾಂಕಿಂಗ್ ಕನ್ನಡ ತರಗತಿಗಳನ್ನು ಯೋಜಿಸಿ ಪರೀಕ್ಷೆ ನಡೆಸುವುದಲ್ಲದೆ ಆ ಪರೀಕ್ಷೆಗಳಲ್ಲಿ ಉತ್ತೀರ್ಣ ಹೊಂದಿದವರಿಗೆ, ಪ್ರಸ್ತುತ ಹಿಂದಿ ಭಾಷೆಯ ಶೀಘ್ರಲಿಪಿ, ಬೆರಳಚ್ಚು ಮತ್ತಿತರ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುವವರಿಗೆ ನೀಡುತ್ತಿರುವಂತೆ, ಉತ್ತೇಜನ ಧನ ನೀಡುವ ಯೋಜನೆಯೊಂದನ್ನು ಜಾರಿಗೆ ತರುವಂತೆ ಎಲ್ಲ ಬ್ಯಾಂಕ್ ಆಡಳಿತ ವರ್ಗಗಳಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಕರ್ನಾಟಕ ಸರ್ಕಾರವನ್ನು ಈ ಅಧಿವೇಶನ ಕೋರುತ್ತದೆ.'

8 'ಕರ್ನಾಟಕದಲ್ಲಿರುವ ಬ್ಯಾಂಕುಗಳಲ್ಲಿ ಕನ್ನಡ ಭಾಷೆಯನ್ನು ಶೀಘ್ರವಾಗಿ ಜಾರಿಗೆ ತರಲು ಅನುಕೂಲವಾಗುವಂತೆ ಏಕರೂಪದ ನಮೂನೆಗಳನ್ನು, ದಸ್ತಾವೇಜುಗಳನ್ನು ಕನ್ನಡದಲ್ಲಿ ಸಿದ್ಧಪಡಿಸಿ, ಎಲ್ಲ ಬ್ಯಾಂಕುಗಳ ಆಡಳಿತ ವರ್ಗಕ್ಕೆ ಅದರ ಪ್ರತಿಗಳನ್ನು ಒದಗಿಸುವುದಲ್ಲದೇ ಬ್ಯಾಂಕು ವ್ಯವಹಾರಗಳಲ್ಲಿ ಬಳಸಲಾಗುವ ಪದಗಳಲ್ಲಿ ಏಕರೂಪತೆಯನ್ನು ತರಲು ಸಹಾಯಕವಾಗುವಂತೆ ಬ್ಯಾಂಕುಗಳಿಗೆ ಸಂಬಂಧಿಸಿದ 'ಪದಗಳ ಬ್ಯಾಂಕ್' ಒಂದನ್ನು ಸ್ಥಾಪಿಸಬೇಕೆಂಬ ಸಮನ್ವಯ ಸಮಿತಿಯ ಯೋಜನೆಗೆ ಸಹಾಯ, ಸಹಕಾರ ನೀಡಬೇಕೆಂದು ಈ ಅಧಿವೇಶನವು ಕರ್ನಾಟಕ ಸರ್ಕಾರವನ್ನು ವಿನಂತಿಸಿಕೊಳ್ಳುತ್ತದೆ.'

9 'ಕನ್ನಡ ಆಡಳಿತ ಭಾಷಾ ಕಾವಲು ಸಮಿತಿಯ ವ್ಯಾಪ್ತಿಗೆ ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲ ಬ್ಯಾಂಕುಗಳನ್ನೂ ಒಳಪಡಿಸಬೇಕೆಂದೂ ಈ ಅಧಿವೇಶನವು ಕರ್ನಾಟಕ ಸರ್ಕಾರವನ್ನು ಒತ್ತಾಯಿಸುತ್ತದೆ.'

'ಸಮನ್ವಯ ಸಮಿತಿಯು, ಸುಮಾರು ಮೂರು ಸಾವಿರಕ್ಕೂ ಹೆಚ್ಚು ಪದಗಳುಳ್ಳ "ಇಂಗ್ಲಿಷ್-ಕನ್ನಡ" ಬ್ಯಾಂಕಿಂಗ್ ಪಾರಿಭಾಷಿಕ ಪದಕೋಶವೊಂದನ್ನು ಹೊರತರಲು ಉದ್ದೇಶಿಸಿದೆಯಲ್ಲದೆ, ಪ್ರಸ್ತುತ 'ಬ್ಯಾಂಕಿಂಗ್ ಪ್ರಪಂಚ' ಎಂಬ ಅರ್ಧ ವಾರ್ಷಿಕ ನಿಯತ ಕಾಲಿಕವೊಂದನ್ನು (ಬ್ಯಾಂಕಿಂಗ್ ಹಾಗೂ ಹಣಕ್ಕೆ ಸಂಬಂಧಿಸಿದ) ಪ್ರಕಟಪಡಿಸುತ್ತಿದೆ. ಈ ಎರಡೂ ಪ್ರಕಟಣೆಗಳಿಗೆ ಆರ್ಥಿಕ ನೆರವು ನೀಡುವುದು ಮಾತ್ರವಲ್ಲದೆ ಕರ್ನಾಟಕ ರಾಜ್ಯದಲ್ಲಿರುವ ವಾಚನಾಲಯಗಳು, ಗ್ರಂಥಾಲಯಗಳು, ವಿಶ್ವವಿದ್ಯಾನಿಲಯಗಳು, ಶಾಲೆ ಕಾಲೇಜುಗಳು ಮುಂತಾದುವುಗಳು ನಿಘಂಟನ್ನು ಕೊಳ್ಳಲು ಮತ್ತು 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಆಜೀವ ಸದಸ್ಯರಾಗಲು ಸೂಕ್ತ ನಿರ್ದೇಶನವನ್ನು ನೀಡಬೇಕೆಂದು ಈ ಕಮ್ಮಟಿಗರ ಅಧಿವೇಶನವು ಕರ್ನಾಟಕ ಸರ್ಕಾರವನ್ನು ಕೋರುತ್ತದೆ.'

ಬಾದಾಮಿಯಲ್ಲಿ ಬ್ಯಾಂಕಿಂಗ್ ಕಮ್ಮಟಿಗರು ತಮ್ಮ ಮೊದಲ ಅಧಿವೇಶನ ನಡೆಸುತ್ತಿರುವುದಕ್ಕೆ ಸಂತೋಷ ವ್ಯಕ್ತಪಡಿಸಿದರು.

ಕೊನೆಯಲ್ಲಿ ಶ್ರೀ ಪು. ರಾ. ಮುರಳೀಧರರ ವಂದನಾರ್ಪಣೆಯೊಂದಿಗೆ ಬ್ಯಾಂಕಿಂಗ್ ಕಮ್ಮಟಿಗರ ಮೊದಲ ಅಧಿವೇಶನ ಅಂತ್ಯಗೊಂಡಿತು.

★

● ● ●

# ‘ಬ್ಯಾಂಕಿಂಗ್ ಪ್ರಪಂಚ’ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ ಮುಂದುವರಿದ ಪಟ್ಟಿ)

222 ಎಂ. ವಿ. ಮುರಳೀಧರ
223 ಎ. ವಿಠ್ಠಲಮೂರ್ತಿ
224 ಬಿ. ಲಕ್ಷ್ಮೀನಾರಾಯಣ
225 ಜಿ. ಸುಬ್ರಹ್ಮಣ್ಯಂ
226 ಟಿ. ವಿ. ಸುಬ್ರಮಣ್ಯಂ
227 ಕೆ. ಕಮಲಾಕ್ಷ
228 ಜಿ. ಶಾಂತಾರಾಂ
229 ಕೆ. ಆರ್. ಚೌಡಪ್ಪ
230 ಬಿ. ವಿಶ್ವನಾಥ್
231 ಕೆ. ಎಸ್. ನರಸಿಂಹಮೂರ್ತಿ
232 ಎಸ್. ಕೃಷ್ಣ
233 ಸಿ. ಸುಬ್ರಹ್ಮಣ್ಯಂ
234 ಆರಾಧ್ಯ ಚಂದ್ರಮೋಹನ್
235 ಪಿ. ಸೂರ್ಯಪ್ರಕಾಶ್
236 ಮುಕುಂದಕುಮಾರ್‌ಜ
237 ಹಾ. ರ. ಕೃಷ್ಣಕುಮಾರ್
238 ಎನ್. ಎಲ್. ಬಾಲಸುಬ್ರಹ್ಮಣ್ಯಂ
239 ಕೆ. ಎನ್. ಶ್ರೀನಿವಾಸನ್
240 ಆರ್. ಎ. ಕೃಷ್ಣ
241 ವಿ. ಎನ್. ವಡೇರ್
242 ಕೆ. ಟ್ಷ್ ಪಂಪಾಪತಿ
243 ಕೆ. ಎಂ. ಕುಲಕರ್ಣಿ
244 ವನಜಾಕ್ಷಿ ಎಂ. ರಾವ್
245 ರಂಗನಾಥನ್
246 ಎನ್. ಅಶ್ವತ್ಥನಾರಾಯಣ
247 ಎನ್. ಕೆ. ಶ್ರೀಕಂಠಶಾಸ್ತ್ರಿ
248 ಕೆ. ನಾಗರಾಜ
249 ಎನ್. ಆರ್. ಅನಂತನಾರಾಯಣನ್
250 ಚಾರ್ಲ್ಸ್ ಡಿಸೋಜ
251 ಶಾ. ಅಚ್ಚಣ್ಣ
252 ಕೆ. ಎನ್. ಗುರುದತ್ತ
253 ಎನ್. ಜಿ. ನಾಗರಾಜ ಪುರಾಣಿಕ
254 ಕೆ. ಶಂಕರ್
255 ಬಿ. ಟಿ. ಇಂದಿರೇಶ್
256 ಕೆ. ಬಿ. ಜಯಪ್ರಕಾಶ್
257 ಮಾರನಾಯಕ
258 ಅತ್ತೂರು ಚೈಯ್ಯಬ್ಬ
259 ಎಂ. ವಿ. ಮುನಿರಾಜು
260 ಬಿ. ಟಿ. ಆನಂದಕುಮಾರ್
261 ಆ. ರಾ. ನರಸಿಂಹಸ್ವಾಮಿ
262 ಮಹಾಬಲರಾಜು
263 ಪಿ. ರೇವಣ್ಣಸ್ವಾಮಿ
264 ಎಸ್. ಕೆ. ಕಾರಿಯಪ್ಪ
265 ಬಿ. ವಿಶ್ವನಾಥ
266 ಸಿ. ಹೆಚ್. ರಾಮು
267 ಹೆಚ್. ಬಿ. ಮಿತ್ರ
268 ಷಡಕ್ಷರಿ
269 ಆರ್. ಶ್ರೀಧರ
270 ಆರ್. ಎ. ಮುರಳೀಮೋಹನ
271 ಕೆ. ಗುಂಡಾಚಾರ್

ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು :

272 ಹಿರೇಪೇಟೆ ಶಾಖೆ (ಹುಬ್ಬಳ್ಳಿ)
273 ಹುಬ್ಬಳ್ಳಿ ಶಾಖೆ
274 ವೀಲ್ ಅಂಡ್ ಆ್ಯಕ್ಸಲ್ ಪ್ಲಾಂಟ್ ಶಾಖೆ (ಯಲಹಂಕ)
275 ಹರಿಹರ
276 ಉಗಾರ್‌ಬದ್ರುಕ್
277 ಬಟವಾಡಿ ಇಂಡಸ್ಟ್ರಿಯಲ್ ಎಸ್ಟೇಟ್
278 ಅರಸೀಕೆರೆ
279 ಮೂರುಕಾವೇರಿ (ಕಿನ್ನಿಗೋಳಿ)
280 ಮಲ್ಲಿಕಟ್ಟ
281 ಹಂಪನಕಟ್ಟ
282 ಪಣಂಬೂರು
283 ಕಾರ್ನಾಡ್
284 ಸಿಲ್ವರ್‌ಗೇಟ್ (ಮಂಗಳೂರು)
285 ಬೆಳ್ತಂಗಡಿ
286 ಅಳಕೆ
287 ತೋವಿನಕೆರೆ
288 ಕೃಷಿ ಅಭಿವೃದ್ಧಿ ಶಾಖೆ, ರಾಣೆಬೆನ್ನೂರು
289 ಮಂಡ್ಯ
290 ಕ್ಯಾತನಗೆರೆ
291 ನಿಡಗುಂಡಿ
292 ಹುನಗುಂದ
293 ಸಂತೇಕಟ್ಟೆ
294 ಕೃಷಿ ಅಭಿವೃದ್ಧಿ ಶಾಖೆ, ಹಾವೇರಿ
295 ಸುರತ್ಕಲ್
296 ಸದಾಶಿವನಗರ
297 ಮುನೀರಾಬಾದ್
298 ರಾಯಚೂರು
299 ಬೈಲಹೊಂಗಲ
300 ರಾಣೆಬೆನ್ನೂರು
301 ಚಿಕ್ಕೋಡಿ

302 ಬಂಡಿವಾಡಬೇಸ್ ಶಾಖೆ (ಹುಬ್ಬಳ್ಳಿ)
303 ಕೃಷಿ ಅಭಿವೃದ್ಧಿ ಶಾಖೆ, ನರಗುಂದ
304 ಇಂಡಿ
305 ಶಂಕರಘಟ್ಟ
306 ಹಾಸನ
307 ಹುಳಿಯಾರು
308 ಶ್ರೀನಗರ
309 ತ್ಯಾಗರಾಜನಗರ
310 ಹೊನ್ನಾವರ
311 ಮಳಗಿ
312 ರಿಚರ್ಡ್ಸ್‌ಟೌನ್
313 ಯಲ್ಲಾಪುರ
314 ಗುಲ್ಬರ್ಗಾ
315 ಬ್ಯಾಟರಾಯನಪುರ
316 ಬೆಟಗೇರಿ (ಗದಗ)
317 ಏರ್ ಫೋರ್ಸ್ ಸ್ಟೇಷನ್, ಜಾಲಹಳ್ಳಿ (ಪೂರ್ವ)
318 ಇಂದಿರಾನಗರ
319 ತುಮಕೂರು
320 ಸಣ್ಣ ಕೈಗಾರಿಕೆ ಶಾಖೆ (ಮೈಸೂರು)
321 ದೊಡ್ಡಬಳ್ಳಾಪುರ
322 ಪದ್ಮನಾಭನಗರ
323 ವದನಕಲ್
324 ಅಲಸೂರು
325 ಸಿಬ್ಬಂದಿ ತರಬೇತಿ ಕೇಂದ್ರ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಳಗಾವಿ
326 ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು, ಬೆಂಗಳೂರು
327 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ನಾಗರಭಾವಿ ಶಾಖೆ ಬೆಂಗಳೂರು
328 ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ
329 ಸ್ಥಳೀಯ ಅನುಷ್ಠಾನ ಸಮಿತಿ, ಭಾರತೀಯ ಸ್ಟೇಟ್ ಬ್ಯಾಂಕ್, ಅಥಣಿ ಶಾಖೆ
330 ಭಾರತೀಯ ಸ್ಟೇಟ್ ಬ್ಯಾಂಕ್, ಹುಲಸೂರು ಶಾಖೆ





